ನೆಹರೂ ಬಾಲಪುಸ್ತಕಾಲಯ

# ಬಾಪು

[ಭಾಗ-1]

ಲೇಖಕ ಮತ್ತು ಚಿತ್ರಕಾರ
ಎಫ್. ಸಿ. ಫ್ರೇಟಸ್
ಅನುವಾದ
ಎಚ್. ಎಸ್. ಪಾಟೀಲ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ



ISBN 81-237-0796-7

ಮೊದಲ ಮುದ್ರಣ : 1970 (ಶಕ 1892)
ನಾಲ್ಕನೆ ಮುದ್ರಣ : 1994 (ಶಕ 1915)



ರೂ. 7.00
**Bapu Part-I** ***(Kannada)***
ನಿರ್ದೇಶಕರು, ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ
ಎ-5, ಗ್ರೀನ್ ಪಾರ್ಕ್, ಹೊಸ ದೆಹಲಿ 110 016
ಇವರಿಂದ ಪ್ರಕಟಿತ.



ಕ್ರಿಸ್ತಶಕ 1878. ದೆಹಲಿಯಲ್ಲಿ ಅತ್ಯಂತ ಸಂಭ್ರಮ ; ಒಂದು ಕಾಲಕ್ಕೆ ಅದು ಮಹಾ ರಾಜ್ಯಗಳ ಮತ್ತು ವಿಶಾಲ ಸಾಮ್ರಾಜ್ಯಗಳ ರಾಜಧಾನಿಯಾಗಿತ್ತು. ನಗರದಲ್ಲಿ ಮಹಾರಾಜರು ನವಾಬರು ಮತ್ತು ನೂರಾರು ಜನ ರಾಜಕುಮಾರರು ಭಾರತದ ಎಲ್ಲ ಭಾಗಗಳಿಂದ ಬಂದು ನೆರೆದರು. ಅವರೆಲ್ಲ ಸೊಗಸಾದ ಬಟ್ಟೆಗಳನ್ನು ಧರಿಸಿದ್ದರು ಮತ್ತು ವಜ್ರದ ಆಭರಣಗಳನ್ನು ಹಾಕಿಕೊಂಡಿದ್ದರು. ಆಗ್ಗೆ ಬ್ರಿಟಿಷ್ ಭಾರತದ ರಾಜಧಾನಿಯಾಗಿದ್ದ ಕಲ್ಕತ್ತದಿಂದ, ಭಾರತದಲ್ಲಿ ಬ್ರಿಟಿಷ್ ಶಾಸಕರ ಪ್ರತಿನಿಧಿಯಾಗಿದ್ದ ವೈಸರಾಯನು ತನ್ನ ಒಡ್ಡೋಲಗದೊಂದಿಗೆ ಬಂದಿದ್ದನು.

ರಾಜವೈಭವದ ವಿಶಾಲ ಸಭೆಯೆನಿಸಿದ ದರಬಾರಕ್ಕಾಗಿ ಎಲ್ಲ ಸಿದ್ಧತೆಯಾಗಿತ್ತು. ಇಂತಹ ಸಭೆಗಳು ವಿಶಿಷ್ಟವಾದ ಸಂದರ್ಭಗಳಲ್ಲಿ ಯಾವಾಗಾದರೊಮ್ಮೆ ಜರುಗುತ್ತಿದ್ದುವು. ಈ ಬಾರಿ ಕೂಡ ಅಂತಹ ಒಂದು ವಿಶಿಷ್ಟವಾದ ಉದ್ದೇಶವಿತ್ತು : ಇಂಗ್ಲೆಂಡ್‌ನ ವಿಕ್ಟೋರಿಯಾ ಮಹಾರಾಣಿಯನ್ನು ಭಾರತದ ಸಾಮ್ರಾಜ್ಞಿ ಎಂದು ಸಾರಬೇಕಾಗಿತ್ತು.

ರಾಜಕುಮಾರರೂ ಇತರರೂ ಮಹಾರಾಣಿಯವರಲ್ಲಿ ತಮ್ಮ ನಿಷ್ಠೆಯನ್ನು ಸಲ್ಲಿಸಿ, ಆಕೆಗೆ

ನಚ್ಚಿನ ನೆರವನ್ನು ನೀಡುವ ವಚನವನ್ನು ಕೊಟ್ಟರು. ಈ ನಾಡಿನಲ್ಲಿ ಬ್ರಿಟಿಷ್ ಶಾಸನವು ಬಹು ಕಾಲ ನಡೆಯುವುದೆಂದು ಅವರು ಹಾರೈಸಿದರು.

ಆ ಕಾಲದಲ್ಲಿ ದುರ್ಬಲನಾದ ಒಂಬತ್ತು ವರ್ಷದ ಬಾಲಕನೊಬ್ಬನು ಇಲ್ಲದೆಹೋಗದಿದ್ದರೆ ಬ್ರಿಟಿಷ್ ಶಾಸನವು ವರ್ಷಗಟ್ಟಲೆ ಅಲ್ಲಿ ಮುಂದುವರೆಯಬಹುದಿತ್ತು.

ಆ ಬಾಲಕನು ತನ್ನ ಹಲಗೆಯಮೇಲೆ ಏಕಚಿತ್ತದಿಂದ ಲೆಕ್ಕಗಳನ್ನು ಬಿಡಿಸುತ್ತಿದ್ದನು. ನಮ್ಮೆಲ್ಲರ ಹಾಗೆ ಅವನು ಕೂಡ ಅವುಗಳನ್ನು ತಿಳಿಯಲು ಹೆಣಗಿದನು. ಆದರೆ ಆ ಚಿಕ್ಕ ವಯಸ್ಸಿನಲ್ಲಿ ಕೂಡ ಅವನು ಸರಿಯಾದ ಶಿಸ್ತುಗಾರಿಕೆಯನ್ನು ಕಲಿಯ ತಿಳಿಸಿದನು, ದೃಢಸಂಕಲ್ಪದ ಮಹತ್ವವನ್ನು ಗುರುತಿಸಿದನು. ಆಮೇಲೆ ಬ್ರಿಟಿಷ್ ಸಾಮ್ರಾಜ್ಯದ ಶಕ್ತಿಯನ್ನು ಎದುರಿಸಲಿಕ್ಕೆ ಮತ್ತು ತನ್ನ ದೇಶ ಹಾಗೂ ದೇಶಬಾಂಧವರಿಗಾಗಿ ಅದನ್ನು ಗೆಲ್ಲಲಿಕ್ಕೆ ಅವನಿಗೆ ಈ ನಿರ್ಧಾರ ಸಹಾಯವಾಯಿತು.

ಆ ದರಬಾರವಾಗಿ ಅರವತ್ತೊಂಬತ್ತು ವರ್ಷಗಳ ನಂತರ ವಿಕ್ಟೋರಿಯಾ ಮಹಾರಾಣಿಯ ಮರಿಮಗನಾದ ಇಪ್ಪತ್ತನೆಯ ಬ್ರಿಟಿಷ್ ವೈಸರಾಯನು ಭಾರತವು ಸ್ವತಂತ್ರ ಎಂದು ಘೋಷಿಸಿದನು. ಆ ವೈಸರಾಯನ ಹೆಸರು ಲಾರ್ಡ್ ಮೌಂಟ್‌ಬ್ಯಾಟನ್. ಮತ್ತು ಮೇಲೆ ಕಾಣಿಸಿದ ಚಿಕ್ಕ ಬಾಲಕನು ಭಾರತದ ಅಹಿಂಸಾತ್ಮಕ ಸ್ವಾತಂತ್ರ್ಯಸಮರದ ವೀರ ಮೋಹನದಾಸ ಗಾಂಧಿ.

ನೂರು ವರ್ಷಗಳ ಹಿಂದೆ ಕ್ರಿಸ್ತಶಕ 1869 ರ ಅಕ್ಟೋಬರ್ 2ನೆಯ ದಿನಾಂಕ ಸಣ್ಣ ಪಟ್ಟಣವಾದ ಪೋರ ಬಂದರದಲ್ಲಿ ಮೋಹನದಾಸ ಕರಮಚಂದ ಗಾಂಧಿಯು ಹುಟ್ಟಿದನು. ಅದು ಈಗಿನ ಗುಜರಾತ





ರಾಜ್ಯದ ಕಾಠೇವಾಡದ ಕಡಲಂಚಿನಲ್ಲಿ ಹುದುಗಿದೆ. ಮೂರು ಗಂಡು ಒಂದು ಹೆಣ್ಣು ಹೀಗೆ ನಾಲ್ಕುಜನ ಮಕ್ಕಳಲ್ಲಿ ಅವನು ಎಲ್ಲರಿಗಿಂತ ಚಿಕ್ಕವನಾಗಿದ್ದನು. ಅವನ ತಂದೆ ಕರಮಚಂದ ಅಥವಾ ಕಾಬಾ ಗಾಂಧಿ ಮತ್ತು ತಾಯಿ ಪುತಳೀಬಾಯಿ ವ್ಯಾಪಾರಿವರ್ಗಕ್ಕೆ ಸೇರಿದವರಾಗಿದ್ದರು. ಅವರ ಮನೆತನದ ಹೆಸರಾದ ಗಾಂಧಿ ಎಂಬುದು ಕಿರಾಣೀವರ್ತಕನನ್ನು ಸೂಚಿಸುತ್ತಿದ್ದರೂ ಈ ಕುಟುಂಬದ ಸದಸ್ಯರು ಶಾಸಕರಾಗಿದ್ದರು. ಅವನ ಅಜ್ಜ ಪೋರಬಂದರದ ದಿವಾನನಾಗಿದ್ದನು ಮತ್ತು ಅವನ ತಂದೆ ಕೂಡ ಕ್ರಮವಾಗಿ ಪೋರಬಂದರ, ರಾಜಕೋಟ ಮತ್ತು ವಾಂಕಾನೇರಗಳ ದಿವಾನನಾಗಿದ್ದನು. ಕಾಬಾ ಗಾಂಧಿಯು ಸತ್ಯನಿಷ್ಠ, ಧೈರ್ಯಶಾಲಿ ಮತ್ತು ಉದಾರಹೃದಯಿಯಾಗಿದ್ದನು.

ಮೋಹನನಿಗೆ ತನ್ನ ತಂದೆಯು ಶಿಸ್ತಿನ ಮತ್ತು ಸದ್ವರ್ತನೆಯ ಮೇಲುಪಂಕ್ತಿಯಾದನು. ತನ್ನ ವಿಶಾಲ ಧರ್ಮಭಾವನೆಗಾಗಿ ಆತನ ತಾಯಿಯು ಆತನಿಗೆ ಪೂಜ್ಯಳಾಗಿದ್ದಳು. ಆತ್ಮ ಚರಿತೆಯಲ್ಲಿ "ಆಕೆಯ ಧಾರ್ಮಿಕತೆಯು ಹಿರಿದಾದುದು" ಎಂದು ಆತನು ಬರೆದಿದ್ದಾನೆ. ಆಕೆಯು ಸರಳಶ್ರದ್ಧೆಯ ಮಹಿಳೆಯಾಗಿದ್ದಳು. ದೇವರಗುಡಿಗೆ ಹೋಗುವುದನ್ನು ಆಕೆಯು ಎಂದೂ ತಪ್ಪಿಸುತ್ತಿರಲಿಲ್ಲ. ತನ್ನ ಸಂಗಡ ಪ್ರತಿದಿನ ಆಕೆಯು ಆತನನ್ನು ದೇವಾಲಯಕ್ಕೆ

ಕರೆದೊಯ್ಯುತ್ತಿದ್ದಳು. ಇದು ಅವನ ಮೃದುವಾದ ಮತ್ತು ನಿಷ್ಪಾಪ ಮನಸ್ಸಿನಲ್ಲಿ ದೇವರ ಬಗ್ಗೆ ಆಳವಾದ ಮತ್ತು ಅಚಲವಾದ ಶ್ರದ್ಧೆಯನ್ನೂ ಧರ್ಮಭಾವನೆಯನ್ನೂ ಹುಟ್ಟಿಸಿ ಆತನಿಗೆ ಸಂತೋಷವನ್ನೂ ಮನಃಶಾಂತಿಯನ್ನೂ ಒದಗಿಸಿಕೊಟ್ಟಿತು.

ಯಾವಾಗಲೂ ಸಂಕೋಚದ ಹುಡುಗನಾಗಿದ್ದ ಮೋಹನನು ತನ್ನ ಪುಸ್ತಕಗಳಿಂದ ಸಂತೋಷವನ್ನು ಪಡೆಯುತ್ತಿದ್ದನು. ಮನೆ ಮತ್ತು ಪಾಠಶಾಲೆಗಳಿಗೆ ಅವನ ವಿಶ್ವವು ಸೀಮಿತವಾಗಿತ್ತು. ಅದರಲ್ಲಿಯೂ ವಿಶಿಷ್ಟವಾಗಿ ತಾನು ಪೂಜಿಸುತ್ತಿದ್ದ ತನ್ನ ಸೌಮ್ಯಸ್ವಭಾವದ ತಾಯಿಯೊಡನೆ ಅವನು ಹೆಚ್ಚು ಸಮಯವನ್ನು ಕಳೆಯುತ್ತಿದ್ದನು. ಆಕೆಯ ಧಾರ್ಮಿಕತೆ, ಪ್ರಾರ್ಥನೆಯ ರೀತಿ, ಆತ್ಮಶುದ್ಧಿಗಾಗಿ ಆಕೆ ಮಾಡುತ್ತಿದ್ದ ಉಪವಾಸಗಳನ್ನು ಆತ ಆಶ್ಚರ್ಯದಿಂದ ಮೆಚ್ಚಿಕೊಂಡಿದ್ದ.

ಹುಡುಗನಾಗಿದ್ದಾಗ ಸತ್ಯವನ್ನು ನುಡಿಯುವ ಅಭ್ಯಾಸವನ್ನು ಮಾಡಿಕೊಳ್ಳಬೇಕು ಎಂಬುದು ಆತನ ಏಕೈಕ ಅಪೇಕ್ಷೆಯಾಗಿತ್ತು. ಹಾಗೆಯೆ ದುಷ್ಟತನಕ್ಕೆ ಎದುರಾಗಿ ಒಳ್ಳೆಯದನ್ನು ಮಾಡಬೇಕು ಎಂಬುದನ್ನೂ ಆತನು ಕಲಿತನು.

ಮಳೆಗಾಲದಲ್ಲಿ ಉಪವಾಸದ ಕಾಲವಾದ 'ಚಾತುರ್ಮಾಸ'ವಿರುತ್ತದೆ. ಸೂರ್ಯನ [illegible] ತಾಯಿಯು ಊಟಮಾಡುತ್ತಿರಲಿಲ್ಲ. ಮೋಹನನೂ ಅವನ ಸಹೋದರಿಯೂ ಸೂರ್ಯನಿಗಾಗಿ ಕಾಯುತ್ತ ಆಗಾಗ್ಗೆ ನಿಂತಿರುತ್ತಿದ್ದರು. "ದಿನಕರ"ನು ಉದಯಿಸಿದ ಸಮಾಚಾರವನ್ನು ಸಾರುತ್ತ ಅವರು ಓಡಿಬರುತ್ತಿದ್ದರು.



ಅನೇಕ ಬಾರಿ ಸೂರ್ಯನು ಮೋಡಗಳ ಹಿಂದೆ ಮರೆಯಾಗಿದ್ದು ಮಕ್ಕಳಲ್ಲಿ ನಿರಾಸೆಯನ್ನು ಹುಟ್ಟಿಸುತ್ತಿದ್ದನು. ಆದರೆ ಎಂದಿಗೂ ಶಾಂತ ಹಾಗೂ ಧೀರ ಸ್ವಭಾವದವಳಾಗಿದ್ದ ಅವರ ತಾಯಿಯು ಆ ದಿನ ತಾನು



ಉಣ್ಣದೆ ಇರಬೇಕು ಎಂಬುದು ದೇವರ ಇಚ್ಛೆ ಎಂಬುದಾಗಿ ಹೇಳಿ ಅವರನ್ನು ಸಮಾಧಾನ ಗೊಳಿಸುತ್ತಿದ್ದಳು.

ಮೋಹನನ ತಾಯಿ–ತಂದೆಗಳು ಶಾಲೆಯಲ್ಲಿ ಶಿಕ್ಷಣವನ್ನು ಪಡೆದಿರದಿದ್ದರೂ ತಮ್ಮ ಮಗನು ಪಾಠಶಾಲೆಗೆ ಹೋಗಬೇಕು ಎಂಬ ಬಗ್ಗೆ ಅವರು ಉತ್ಸುಕರಾಗಿದ್ದರು. ಅಂತೆಯೇ ಅವರು ಅವನನ್ನು ಪೋರಬಂದರ ಮತ್ತು ರಾಜಕೋಟಗಳಲ್ಲಿ ಸ್ಥಳೀಯ ಶಾಲೆಗಳಿಗೆ ಕಳಿಸಿದರು.

ಅವನೇನೂ ಅಂತಹ ತೀಕ್ಷ್ಣಮತಿಯಾಗಿರಲಿಲ್ಲ; ಆದರೂ ಸದಾಕಾಲ ಅಭ್ಯಾಸದಲ್ಲಿ ತೊಡಗಿದ್ದು ತನ್ನ ಪಾಠಗಳನ್ನು ನಿಯಮಿತವಾಗಿ ಓದಿಕೊಳ್ಳುತ್ತಿದ್ದನು. ಅವನು ಕೇವಲ ತನ್ನ ಪಠ್ಯಪುಸ್ತಕಗಳನ್ನೂ ತಾನು ಮೆಚ್ಚಿದ ಕೆಲವು ಧಾರ್ಮಿಕ ನಾಟಕಗಳನ್ನೂ ಓದುತ್ತಿದ್ದನು.

ಒಮ್ಮೆ ಸಂಚಾರಿ ನಟರ ಒಂದು ಗುಂಪು ನೆರೆಯ ಕೇರಿಯಲ್ಲಿ ನಾಟಕವೊಂದನ್ನು ಆಡಿತು. ಮೋಹನ ಮತ್ತು ಅವನ ಗೆಳೆಯರು ಅದನ್ನು ನೋಡಲಿಕ್ಕೆ ಹೋಗಿದ್ದರು. ಅದು ಹರಿಶ್ಚಂದ್ರ ನಾಟಕ. ಸತ್ಯ ಹಾಗೂ ಕರ್ತವ್ಯಗಳಲ್ಲಿ ಅಪಾರವಾದ ನಿಷ್ಠೆಯಿದ್ದ ಹರಿಶ್ಚಂದ್ರರಾಜನ ಕತೆಯು ಅದರಲ್ಲಿ ಚಿತ್ರಿತವಾಗಿತ್ತು. ತನ್ನ ಮಡದಿಯನ್ನು ಕೂಡ ಶಾಸನವನ್ನು ಮೀರಿಹೋಗಲು ಬಿಡದಷ್ಟು ಆತನ ಪ್ರಾಮಾಣಿಕತೆ ಹಾಗೂ ಕರ್ತವ್ಯಪರಾಯಣತೆಗಳು ಅಮೋಘವಾಗಿದ್ದವು.



ಆ ನಾಟಕವು ಮೋಹನನ ಮೇಲೆ ಹೆಚ್ಚಿನ ಪ್ರಭಾವವನ್ನು ಬೀರಿತು. ಅವನು ಕಣ್ಣೀರನ್ನು ಸುರಿಸಿದನು. ದಾರಿಯು ಎಷ್ಟೆ ದುರ್ಗಮವಾಗಿರಲಿ ಹರಿಶ್ಚಂದ್ರನಂತೆ ಸತ್ಯವಂತನಾಗಿ ಪ್ರಾಮಾಣಿಕನಾಗಿರಬೇಕೆಂದು ಅವನು ಹಂಬಲಿಸಿದನು. ಆಗ್ಗೆ ಅವನ ಸತ್ಯ ನಿಷ್ಠೆಯು ಪೂರ್ಣವಾಗಿ ರೂಪುಗೊಂಡಿತು.

ನಿರೀಕ್ಷೆಗೆಂದು ಬಂದಿದ್ದ ಶ್ರೀ ಗೈಲ್ಸ್ ಎಂಬ ಇಂಗ್ಲಿಷ್ ಅಧಿಕಾರಿಯು ಮಕ್ಕಳ ಪಾಠಗಳನ್ನು ಪರೀಕ್ಷಿಸುತ್ತಿದ್ದನು. ಅವರಿಗೆ ಹೇಳಿದ ಐದು ಸರಳವಾದ ಶಬ್ದಗಳನ್ನು ಮೋಹನನ ಹೊರತಾಗಿ ಎಲ್ಲರೂ ಸರಿಯಾಗಿ ಬರೆದಿದ್ದರು. ಮೋಹನದಾಸನು 'ಕೆಟಲ್' ಎಂಬ ಶಬ್ದವನ್ನು ಸರಿಯಾಗಿ ಬರೆಯಲಿಲ್ಲ.

ತನ್ನ ಹೆಸರಿಗೆ ಕುಂದು ಬರುವದೆಂದು ಅಧ್ಯಾಪಕನು ಗಾಬರಿಯಾದನು. ಸಮೀಪದ ಹುಡುಗನ ಹಲಗೆಯಿಂದ ಆ ಶಬ್ದವನ್ನು ನೋಡಿ ಬರೆಯುವಂತೆ ಆತನು ತನ್ನ ವಿದ್ಯಾರ್ಥಿಗೆ ಸನ್ನೆಯಿಂದ ಸೂಚಿಸಿದನು. ಆದರೆ ಮೋಹನನು ಸ್ತಬ್ಧನಾಗಿ ನಿಂತನು. ಅಧಿಕಾರಿಯ ಗಮನವು ಬೇರೆ ಕಡೆ ಇದ್ದರೂ ಅವನು ಮೋಸಮಾಡಲಿಕ್ಕೆ ಒಪ್ಪಲಿಲ್ಲ. ಅವನಿಗೆ ನಾಚಿಕೆಯೆನಿಸಿತು; ತನ್ನ ಸಹಪಾಠಿಗಳು ತನ್ನನ್ನು ನೋಡಿ ನಗಬಹುದು ಹಾಗೂ ತನ್ನ ಅಧ್ಯಾಪಕನು

ಸಿಟ್ಟಾಗಬಹುದು ಎಂಬುದನ್ನು ಆತನು ಅರಿತಿದ್ದನು. ಆದರೆ ಎಷ್ಟೇ ಕಷ್ಟವಾದರೂ ಮೋಸದಿಂದ ಸತ್ಯವನ್ನು ತೊರೆಯಲಾಗದು ಎಂಬುದನ್ನು ಆತನು ತಿಳಿದಿದ್ದನು. ಅಂತೆಯೆ ಅವನು ಮೌನವಾಗಿರುವದು ಮೇಲು ಎಂದುಕೊಂಡನು.

ವರ್ಗವು ಮುಗಿದನಂತರ ಅಧ್ಯಾಪಕನು ಮೋಹನನನ್ನು ಬಯ್ದನು. ಅವನು ಮನೆಗೆ ಹಿಂತಿರುಗಿದ ನಂತರ ಸಿಟ್ಟು ಮತ್ತು ಅಪಮಾನಗಳಿಂದ ನೊಂದು ದುಃಖಿತನಾದನು. ತಾನು ಏಕಾಂಗಿಯಾಗಿರುವಂತೆ ತೋಚಿತು. ಆದರೆ ತಾನು ಮಾಡಿದುದು ಸರಿ ಎಂಬುದು ಅವನಿಗೆ ತಿಳಿದಿತ್ತು.

ಆ ಕಾಲದಲ್ಲಿ ಬಾಲ್ಯವಿವಾಹಗಳು ಸಾಮಾನ್ಯವಾಗಿದ್ದವು. ಮೋಹನನು ಮದುವೆಯಾದಾಗ್ಗೆ ಅವನ ವಯಸ್ಸು ಕೇವಲ 13 ವರ್ಷ. ಅವನ ದಂಪತಿ ಕಸ್ತೂರಬಾಯಿಯ ವಯಸ್ಸೂ ಅಷ್ಟೆ ಆಗಿತ್ತು. ಮುಂದೆ ಅವನು ಬಾಲ್ಯವಿವಾಹಗಳು 'ಒಂದು ಕ್ರೂರವಾದ ಪದ್ಧತಿ' ಎಂದರೂ ಆ ಸಮಯಕ್ಕೆ ಅವನಿಗೆ ಬೇರೆ ದಾರಿಯೆ ಇರಲಿಲ್ಲ.

ಕಸ್ತೂರಬಾಯಿಗೆ ತನ್ನ ಕರ್ತವ್ಯದಲ್ಲಿ ಅಪಾರವಾದ ಶ್ರದ್ಧೆಯಿದ್ದಿತು. ಆಕೆಯು ಎಂದೂ ಪಾಠಶಾಲೆಗೆ ಹೋಗಿರಲಿಲ್ಲ; ಅಂತೆಯೆ ಆಕೆಗೆ ಓದು–ಬರೆಹ ಬರದಿದ್ದರೂ ಆಕೆಯ ವಿವೇಚನಾ ಶಕ್ತಿಯು ಆಳವಾಗಿತ್ತು. ಆಕೆಯಿಂದ ಆಕೆಯ ಪತಿಗೆ ತುಂಬ ಸಹಾಯವಾಯಿತು. ತನ್ನ ಸ್ವಾರ್ಥತ್ಯಾಗ ಮತ್ತು ಸಹಕಾರಗಳ ಮೂಲಕ ಆತನಿಗೆ ಆಕೆಯು ಪ್ರಿಯ ಸಹಚಾರಿಣಿಯಾದಳು, ಕಷ್ಟ ಹಾಗೂ ತೊಂದರೆಯ ಸಮಯದಲ್ಲಿ ಆತನಿಗೆ ನೆರವಾಗುತ್ತಿದ್ದಳು,





ಮೋಹನನ ಮದುವೆಯಿಂದ ಆತನ ಶಿಕ್ಷಣಕ್ಕೆ ಅಡ್ಡಿಯಾಗಿ ಆತ ಪಾಠಶಾಲೆಯಲ್ಲಿ ಒಂದು ವರ್ಷ ಹಿಂದೆ ಉಳಿದನು. ಆದರೆ ಆತನ ಅಧ್ಯಾಪಕರು ಅವನು ತನ್ನ ಅಧ್ಯಯನವನ್ನು ಮುಂದುವರಿಸಬೇಕು, ಒಂದೇ ವರ್ಷದಲ್ಲಿ ಎರಡು ವರ್ಗಗಳನ್ನು ದಾಟುವಂತೆ ಹೆಚ್ಚು ಓದಿ ಕಳೆದ ಸಮಯವನ್ನು ಉಳಿಸಿಕೊಳ್ಳಬೇಕು ಎಂದು ಉತ್ಸುಕರಾಗಿದ್ದರು. ಅಂತೆಯೆ ಮೋಹನನು ರಭಸದಿಂದ ಅಭ್ಯಾಸದಲ್ಲಿ ತೊಡಗಿದನು, ನಿರ್ದಿಷ್ಟವಾದ ಪಾಠಕ್ರಮವನ್ನು ಶ್ರಮವಹಿಸಿ ಮುಗಿಸಿದನು, ಆದೆಲ್ಲದರ ಪರಿಣಾಮವಾಗಿ ಅವನ ಪ್ರಯತ್ನವು ಸಫಲವಾಯಿತು.

ವಿದ್ಯಾರ್ಥಿಯಾಗಿದ್ದಾಗ ಮೋಹನನು ಯಾವಾಗಲೂ ನಿಧಾನಸ್ಥನೂ, ಹೆಂಜರಿಯುವ ಹಾಗೂ ಸಂಕೋಚ ಸ್ವಭಾವದವನೂ ಆಗಿದ್ದನು. ಅವನು ಕಷ್ಟಪಟ್ಟು ಓದುತ್ತಿದ್ದರೂ ವರ್ಗಗಳಲ್ಲಿ ಪಡೆಯಬಹುದಾದ ಯಶಸ್ಸಿಗಿಂತ ಹೆಚ್ಚಿನ ಫಲಕ್ಕಾಗಿ ಆತನು ಹೆಣಗುತ್ತಿದ್ದನು. ತನ್ನ ಚಾರಿತ್ರ್ಯವು ಪ್ರಬಲವಾಗಿರಬೇಕು ಕೀರ್ತಿಯು ಪರಿಶುದ್ಧವಾಗಿರಬೇಕು ಎಂದು ಅವನು ಪ್ರಯತ್ನಿಸುತ್ತಿದ್ದನು.

'ಕೆಟಲಿ'ನ ಪ್ರಕರಣವು ಆತನ ಸತ್ಯನಿಷ್ಠೆಯನ್ನು ಖಚಿತಗೊಳಿಸಿತ್ತು. ಅನಂತರದ ವರ್ಷಗಳಲ್ಲಿ ಆತನು ತನ್ನ ಎಲ್ಲ ಶಿಕ್ಷಕರ ಪ್ರೀತಿಗೂ ಸದ್ಭಾವನೆಗೂ ಪಾತ್ರನಾದನು.

ವಾಡಿಕೆಯ ಆಟ – ಪಾಟಗಳು ಅವನಿಗೆ ರುಚಿಸಲಿಲ್ಲ. ಬಯಲಿನಲ್ಲಿ ಭರದಿಂದ ದೂರ ತಿರುಗಾಡುತ್ತ ಹೋಗುವುದು ಅವನಿಗೆ ತುಂಬ ಸೇರುತ್ತಿತ್ತು. ನಿಯಮಿತವಾಗಿ ಹೀಗೆ ತಿರುಗಾಡಲಿಕ್ಕೆ ಹೋಗುವ ಅವನ ಅಭ್ಯಾಸವು ಕೊನೆಯುವರೆಗೆ ಇದ್ದಿತು. ಅದರಿಂದ ತನಗೆ ಶಕ್ತಿ ಮತ್ತು ಉತ್ಸಾಹಗಳು ದೊರೆಯುತ್ತಿದ್ದವು ಎಂದು ಆತನು ಆಮೇಲೆ ಹೇಳಿರುವನು. ಹೀಗೆ ಅವನು ಶಕ್ತನಾಗಿ, ಕಾರ್ಯಶೀಲನಾಗಿ ಸತ್ಯ–ನಿಷ್ಠನಾಗಿ ಬೆಳೆದನು.

ಆದರೂ ಮೋಹನನು ಮನುಷ್ಯಮಾತ್ರನಿಗೆ ಸಹಜವಾದ ಪ್ರೇರಣೆಗಳಿಗೆ ಬಲಿಯಾಗುತ್ತಿದ್ದನು. ಒಮ್ಮೆ ಅವನು ಒಂದು ಬಂಗಾರದ ವಸ್ತುವನ್ನು ಕದ್ದನು. ಆದರೆ ಕೂಡಲೆ ಆತನಿಗೆ ಪರಿತಾಪವಾಯಿತು.

ಮತ್ತೊಮ್ಮೆ ಎಂದೂ ಕಳವು ಮಾಡಬಾರದು ಎಂದು ಆತನು ನಿರ್ಧರಿಸಿದನು. ಆ

ಘಟನೆಯ ವಿಷಯವಾಗಿ ತನ್ನ ತಂದೆಯ ಸಮುಕ್ಷದಲ್ಲಿ ತಪ್ಪನ್ನು ಒಪ್ಪಿಕೊಳ್ಳಬೇಕು ಎಂದೂ ನಿರ್ಧರಿಸಿದನು. ಆದರೆ ಆತನ ತಂದೆಯು ಕಾಯಿಲೆಯಿಂದ ಮಲಗಿಕೊಂಡಿದ್ದ ಕಾರಣ ಅದರ ಬಗ್ಗೆ ಇನ್ನೂ ವಿಷಣ್ಣನಾದನು.

ಅದನ್ನು ಅವನಿಗೆ ತಡೆದುಕೊಳ್ಳುವುದಾಗಲಿಲ್ಲ. ಕೂಡಲೆ ಅವನು ತಂದೆಗೆ ಒಂದು ಓಲೆಯನ್ನು ಬರೆದು ಅದರಲ್ಲಿ ತನ್ನ ಅಪರಾಧವನ್ನು ಒಪ್ಪಿಕೊಂಡು, ಅದಕ್ಕಾಗಿ ತನ್ನನ್ನು ದಂಡಿಸಬೇಕು ಎಂದು ಬೇಡಿಕೊಂಡನು.

ಆ ಓಲೆಯನ್ನು ಓದುತ್ತ ಆತನ ತಂದೆಯು ಕಣ್ಣೀರನ್ನು ತೆಗೆದನು. ತನ್ನ ಮಗನ ಪ್ರಾಮಾಣಿಕತೆಯ ಬಗ್ಗೆ ಆತನ ಮನಸ್ಸು ಕರಗಿತು. ಆ ಹಾಳೆಯನ್ನು ಹರಿದುಹಾಕಿ ಆತನು ಮಗನನ್ನು ಕ್ಷಮಿಸಿದನು.

"ಆ ದಿನದಿಂದ ಸತ್ಯವನ್ನು ನುಡಿಯುವದೊಂದು ನನ್ನ ಧರ್ಮವಾಯಿತು" ಎಂದು ಮೋಹನನು ಅನಂತರ ಬರೆದಿದ್ದಾನೆ. ಸತ್ಯಕ್ಕೆ ತನ್ನದೇ ಆದ ಒಂದು ಶಕ್ತಿಯಿದೆ ಮತ್ತು ಅದನ್ನು ತಾನು ಎಂದೂ ಮರೆಯಬಾರದು ಎಂಬುದನ್ನು ಆತನು ಮನಗಂಡನು.





ಮೋಹನನಿಗೆ ಹದಿನಾರು ವರ್ಷಗಳ ವಯಸ್ಸು ಆದಾಗ್ಗೆ ಆತನ ತಂದೆಯು ತೀರಿಕೊಂಡನು. ತಂದೆಯ ಕೊನೆಯ ಕಾಯಿಲೆಯಲ್ಲಿ ಮೋಹನನು ಆತನ ಸೇವೆಯನ್ನು ಮಾಡಿದನು. ತಂದೆಯ ಕಾಲುಗಳನ್ನು ಒತ್ತುತ್ತ ಆತನಿಗೆ ನಿದ್ದೆ ಬರುವವರೆಗೆ ಮೋಹನನು ಆತನನ್ನು ಸಂತಯಿಸುತ್ತಿದ್ದನು.

ತನ್ನ ತಂದೆಗೆ ನೆರವು ನೀಡುವಲ್ಲಿ ತಾನು ಯೋಗ್ಯನಾದ ಮಗನೆಂದು ಮೋಹನನಿಗೆ ಅತ್ಯಂತ ಸಮಾಧಾನವಾಗುತ್ತಿತ್ತು. ತಾನು ತನ್ನ ತಂದೆಯ ಬಳಿಯಲ್ಲಿ ಇಲ್ಲದಾಗ್ಗೆ ತಂದೆಯು ತೀರಿಕೊಂಡಿದ್ದು ಅವನ ದುರ್ದೈವವಾಗಿತ್ತು. ಮೋಹನನಿಗೆ ಆ ಬಗ್ಗೆ ಕಡೆಯತನಕ ವಿಷಾದವೆನಿಸಿತು.

1887 ರಲ್ಲಿ ಮೋಹನನಿಗೆ ಹದಿನೆಂಟು ವರ್ಷಗಳಾದಾಗ್ಗೆ ಅವನು ಅಹಮ್ಮದಾಬಾದಿನಿಂದ ಮ್ಯಾಟ್ರಿಕುಲೇಷನ್ ಪರೀಕ್ಷೆಯಲ್ಲಿ ಉತ್ತೀರ್ಣನಾದನು. ಆಗ್ಗೆ ಆತನು ತನ್ನ ಮುಂದಿನ ದಾರಿಯನ್ನು ಗೊತ್ತುಪಡಿಸಿಕೊಳ್ಳಬೇಕಾಯಿತು. ಬೇನೆಯಿಂದ ಬಳಲುವವರಿಗೆ ಸಹಾಯವನ್ನು ಸಲ್ಲಿಸಬೇಕೆಂದು ಆತನು ಡಾಕ್ಟರನಾಗಬಯಸಿದರೆ ಅದಕ್ಕೆ ಮನೆಯ ಜನರು ಒಪ್ಪಲಿಲ್ಲ.

ಅತ್ತ ಆ ಕುಟುಂಬದ ಹಿರಿಯರು ಮತ್ತು ಮಾರ್ಗದರ್ಶಕರೊಬ್ಬರು ಅವನನ್ನು ನ್ಯಾಯ ಅಭ್ಯಾಸಕ್ಕೆಂದು ಇಂಗ್ಲೆಂಡ್‌ಗೆ ಕಳಿಸಬೇಕೆಂದು ಸೂಚಿಸಿದರು.

ವಿದೇಶ ಪ್ರವಾಸದ ವಿಚಾರದಿಂದ ಮೋಹನನಿಗೆ ಪುಳಕವಾಯಿತು. ಆದರೆ ಆತನ ಸಾಂಪ್ರದಾಯಿಕ ತಾಯಿಗೆ ಅದು ಸಮ್ಮತವಾಗಲಿಲ್ಲ. ಇಂಗ್ಲೆಂಡ್ ಜನರ ವಿಚಿತ್ರ ಪದ್ಧತಿಗಳ ಬಗ್ಗೆ ಆಕೆಗೆ ಸಂದೇಹವಿದ್ದಿತು ಮತ್ತು ಅಲ್ಲಿ ತನ್ನ ಮಗನು ಎದುರಿಸಬೇಕಾದ ಅನೇಕ ಪ್ರಲೋಭನಗಳ ವಿಷಯವಾಗಿ ಆಕೆಗೆ ಭಯವೆನಿಸಿತು.

ಅವನು ತನ್ನನ್ನು ಹೋಗಗೊಡುವಂತೆ ತಾಯಿಯಲ್ಲಿ ಪ್ರಾರ್ಥಿಸಿಕೊಂಡನು ಮತ್ತು ವಿದೇಶದಲ್ಲಿ ತಾನು ಮಾಂಸವನ್ನು ತಿನ್ನುವದಿಲ್ಲ ಹಾಗೂ ಮದ್ಯವನ್ನು ಕುಡಿಯುವದಿಲ್ಲ ಎಂದು ವಚನವಿತ್ತನು. ಕೊನೆಗೆ ಆಕೆಯ ಸಮಾಧಾನಕ್ಕಾಗಿ ಆತನು ಶಪಥವೊಂದನ್ನು ಮಾಡಿದನು. ಅನಂತರ ಆತನು ಮುಂಬಯಿಗೆ ಹೋಗಿ ಅಲ್ಲಿಂದ ಇಂಗ್ಲೆಂಡಿಗೆ ಹೋಗಲು ಹಡಗವೊಂದನ್ನು ಏರಿದನು. 1888 ರ ಅಕ್ಟೋಬರ್‌ನಲ್ಲಿ ಲಂಡನ್‌ನ್ನು ತಲುಪಿದನು.

ಇಂಗ್ಲೆಂಡ್‌ನಲ್ಲಿ ಮೋಹನನು ಅಸಂಖ್ಯ ಕಷ್ಟಗಳನ್ನು ಎದುರಿಸಬೇಕಾಯಿತು. ಇಂಗ್ಲಿಷ್ ಜನರ ರೀತಿ-ನೀತಿಗಳ ಭೇದವೂ ಇದ್ದಿತು. ಆಹಾರವೊಂದು ದೊಡ್ಡ ಸಮಸ್ಯೆಯಾಗಿತ್ತು ಮತ್ತು ಶಾಕಾಹಾರವೂ ದೊರೆತಾಗ್ಗೆ ಅದು ರುಚಿಹೀನವಾಗಿರುವಂತೆ ಕಾಣುತ್ತಿತ್ತು.

ಕೆಲಸಮಯದ ಮಟ್ಟಿಗೆ ಒಂದು ತುಟ್ಟಿಯಾದ ಹೋಟೆಲಿನಲ್ಲಿದ್ದು ಬೇಗನೆ ಆತನು ಸುಲಭವಾದ ಹಾಗೂ ಸ್ನೇಹಪೂರ್ಣವಾದ ವಸತಿಗೃಹಕ್ಕೆ ತೆರಳಿದನು. ಆದರೂ ಕೂಡ ಅವನಿಗೆ ತಾನು ಅನಾಥ, ತಾನು ಒಂಟಿ ಎನ್ನಿಸಿತು.

ಒಮ್ಮೆ ಒಂದು ಮೇಲ್ಮಟ್ಟದ ಹೋಟೆಲಿನಲ್ಲಿ ಮೋಹನನು ತನ್ನ ಸಂಗಡ ಊಟಕ್ಕೆ ಬರಲು ಒಪ್ಪಲಿಲ್ಲ ಎಂದು ಅವನ ಸ್ನೇಹಿತನೊಬ್ಬನು ನೊಂದುಕೊಂಡನು. " ನೀನು ಸುಲಕ್ಷಣ ಸಮಾಜದಲ್ಲಿ ತೀರ ಅಂದಗೇಡಿಯಾಗಿ ಕಾಣುವಿ " ಎಂದು ಆ ಗೆಳೆಯನು ಸಿಟ್ಟಿನಲ್ಲಿ ನುಡಿದನು. ಈ ಟೀಕೆಯಿಂದ ಮೋಹನನು ನೊಂದುಕೊಂಡು ಯೋಚನೆಗೆ ಒಳಗಾದನು.





ತಾನು "ಇಂಗ್ಲಿಷ್ ಸಭ್ಯಗೃಹಸ್ಥ"ನಾಗಬೇಕು ಎಂದು ಆತನು ನಿರ್ಧರಿಸಿದನು. ಅಂತೆಯೆ ಅವನು ಉಚ್ಚತರದ ಬಟ್ಟೆಗಳನ್ನು ಹೊಲಿಸಿದನು, ಎತ್ತರವಾದ ಟೋಪಿಯೊಂದನ್ನು ಕೊಂಡನು ಮತ್ತು ಬಂಗಾರದ ಸರಪಳಿಯಿದ್ದ ಒಂದು ಗಡಿಯಾರವನ್ನು ಪಡೆದನು. ಆದರೆ ಎಲ್ಲ ಲಕ್ಷಣ ಗಳನ್ನು ಪರಿಪೂರ್ಣಗೊಳಿಸಲಿಕ್ಕೆ ಆತನ ತಂತಿಯಂತಹ ಬಿರುಸಾದ ಕೂದಲು ಸರಿಯಾಗಿ ಹೊಂದಿಕೊಳ್ಳದೆ ಅಡ್ಡಿಯಾಯಿತು.

ಅದು ಮೊದಲನೆಯ ಹೆಜ್ಜೆಯು ಮಾತ್ರ ಆಗಿತ್ತು. ಸಂಪೂರ್ಣನಾದ "ಇಂಗ್ಲಿಷ್ ಸಭ್ಯ ಗೃಹಸ್ಥ"ನು ಸಂಗೀತ–ನೃತ್ಯಗಳನ್ನು ಅರಿತಿರಬೇಕು ಮತ್ತು ಸುಗಮವಾಗಿ ಮಾತನಾಡು ವಂತಿರಬೇಕು, ಅಂತೆಯೆ ಆತನು ಪಾಶ್ಚಾತ್ಯ ನೃತ್ಯದ ಪಾಠಗಳನ್ನು ಹೇಳಿಸಿಕೊಂಡನು. ಒಂದು ಪಿಟೀಲನ್ನು ಕೊಂಡು ತಂದನು ಮತ್ತು ಪಾಶ್ಚಾತ್ಯ ಸಂಗೀತವನ್ನು ಹೇಳಿಕೊಡಲು ಅಧ್ಯಾಪಕ ನೊಬ್ಬನನ್ನು ಗೊತ್ತುಮಾಡಿಕೊಂಡನು. ಅವನು ಅತ್ತ ಭಾಷಣಕಲೆಯನ್ನೂ ಫ್ರೆಂಚ್‌ಭಾಷೆ ಯನ್ನೂ ಕಲಿಯತೊಡಗಿದನು.

ಈ ಎಲ್ಲ ಪ್ರಯತ್ನಗಳು ನಡೆದರೂ ಆತನ ಯೋಜನೆಯು ಫಲಕಾರಿಯಾಗಲಿಲ್ಲ. ಸಂಗೀತಕ್ಕೆ ತಕ್ಕಂತೆ ಅವನ ಹೆಜ್ಜೆ ಸರಿಯಲಿಲ್ಲ. ಪಾಶ್ಚಾತ್ಯ ಸಂಗೀತವನ್ನು ಕಲಿಯಬೇಕೆಂಬ ಆತನ ಯತ್ನವು

ಕೂಡ ನಿಷ್ಫಲವಾಯಿತು. ಆಮೇಲೆ ಅವನು ಬಣ್ಣಿಸಿದಂತೆ ಮೂರು ಕಷ್ಟದ ತಿಂಗಳಲ್ಲಿ ' ಇಂಗ್ಲಿಷ್ ಸಭ್ಯಗೃಹಸ್ಥ ' ನನ್ನು ಅನುಕರಿಸಿದ ತರುವಾಯ ಆತನಿಗೆ ತಾನು ಮಾಡುತ್ತಿರುವುದು ಮೂರ್ಖತನದ ಕೆಲಸ ಎಂದು ಮನವರಿಕೆಯಾಯಿತು.

ತಾನು ಇಂಗ್ಲೆಂಡ್‌ಗೆ ಬಂದುದು ನ್ಯಾಯಶಾಸ್ತ್ರದ ಅಧ್ಯಯನಕ್ಕಾಗಿ ಎಂದುಕೊಂಡನು ಆತ. ಹಾಗಿದ್ದರೆ ತನ್ನ ಅಮೂಲ್ಯವಾದ ಸಮಯವನ್ನು ಮತ್ತು ತನ್ನ ಸಹೋದರ ಕಷ್ಟದಿಂದ ಗಳಿಸಿದ ಹಣವನ್ನು ಹೀಗೆ ಪ್ರಯೋಜನವಿಲ್ಲದ ವಿಷಯಗಳಿಗಾಗಿ ಹಾಳುಮಾಡುತ್ತಿರುವುದೇಕೆ? ಇದು ಕೂಡಲೇ ನಿಲ್ಲಬೇಕು ಎಂದು ಆತನು ನಿರ್ಧರಿಸಿದನು.

ಅಂತು ಮೋಹನನು ಎಲ್ಲ ' ಸಭ್ಯತೆ ' ಯ ಪಾಠಗಳನ್ನು ಮತ್ತು ಹೊಸ ಬಾಳಿನ ರೀತಿಗಳನ್ನು ತ್ಯಜಿಸಿದನು. ಒಂದು ಕೋಣೆಯಲ್ಲಿ ತಾನೊಬ್ಬನೆ ಇರುತ್ತ ಅಂಬಲಿ ಹಾಗೂ ಕೋಕೋಗಳ ತನ್ನ ಉಪಾಹಾರವನ್ನು ತಾನೇ ಮಾಡಿಕೊಳ್ಳತೊಡಗಿದನು. ದಿನದ ಅವನ ಒಟ್ಟು ವೆಚ್ಚವು ಒಂದು ಷಿಲಿಂಗ್ ಮೂರು ಪೆನ್ನು ಅಥವಾ ಸುಮಾರು ಒಂದು ರೂಪಾಯಿಯದಾಗಿತ್ತು. ಅದರಿಂದ ಅವನ ಮನಸ್ಸು ನಿರುಪಯುಕ್ತ ವಿಚಾರಗಳಿಂದ ಮುಕ್ತವಾಯಿತು ಮತ್ತು ಅವನಿಗೆ ಪರಮ ಸಂತೋಷವಾಯಿತು.



ಆತನಿಗೆ ಆಗಿನಿಂದ ಹೆಚ್ಚು ವೇಳೆಯು ದೊರೆಯುತ್ತಿದ್ದ ಕಾರಣ ಹೆಚ್ಚು ಓದಲಿಕ್ಕೆ ಕೂಡ ಅನುಕೂಲವಾಯಿತು. ಅವನು ಲಂಡನ್‌ನ ಮ್ಯಾಟ್ರಿಕ್ ಪರೀಕ್ಷೆಗಾಗಿ ಓದಿ ಅದರಲ್ಲಿ ತೇರ್ಗಡೆ ಹೊಂದಿದನು. ಅವನು ಲ್ಯಾಟಿನ್ ಮತ್ತು ಫ್ರೆಂಚ್ ಭಾಷೆಗಳನ್ನು ಕೂಡ ಕಲಿತನು. ಅತ್ತ ನ್ಯಾಯಶಾಸ್ತ್ರ ಪದವಿಗಾಗಿ ತರಗತಿಗಳಿಗೂ ಹೋಗುತ್ತಿದ್ದನು.

ಆಹಾರದ ವಿಷಯವಾಗಿ ಆತನು ತರತರದ ಪ್ರಯೋಗಗಳನ್ನು ಕೈಕೊಂಡನು ಮತ್ತು ಅದಕ್ಕಾಗಿ ಸಾಧ್ಯವಾದ ಎಲ್ಲ ಪುಸ್ತಕಗಳನ್ನು ಓದಿದನು. ಶೀಘ್ರದಲ್ಲಿಯೆ ಶಾಕಾಹಾರವು ಎಲ್ಲಕ್ಕಿಂತ ಹೆಚ್ಚು ಆರೋಗ್ಯಕರವಾದುದು ಎಂಬ ತೀರ್ಮಾನವನ್ನು ಮಾಡಿಕೊಂಡನು.

ಲಂಡನ್‌ನ ಶಾಕಾಹಾರಿಗಳ ಸಂಗಡ ಸ್ನೇಹವನ್ನು ಬೆಳಸಿ ತಾನು ವಾಸಿಸುವ ಭಾಗದಲ್ಲಿ ಒಂದು ಶಾಕಾಹಾರಿಗಳ ಸಂಘವನ್ನು ಸ್ಥಾಪಿಸಿದನು. ತಾನೇ ಆ ಸಂಘದ ಕಾರ್ಯದರ್ಶಿಯಾಗಿದ್ದ ಕಾರಣ ಲಂಡನ್‌ನ ಶಾಕಾಹಾರಿಗಳ ಸಭೆಯ ಸಮಿತಿಗೆ ಕೂಡಲೇ ಸದಸ್ಯನೆಂದು ಅವನ ಆಯ್ಕೆಯಾಯಿತು. ಆ ಸಮಿತಿಯ ಸಭೆಗಳಿಗೆ ಹೋದಾಗ್ಗೆ ಭಾಷಣ ಮಾಡಲಿಕ್ಕೆ ಅವನಿಗೆ ಸಂಕೋಚವಾಗುತ್ತಿತ್ತು ಮತ್ತು ಆ ಕಾರಣವಾಗಿ ಅಲ್ಲಿಯ ಚರ್ಚೆಯಲ್ಲಿ ಸಕ್ರಿಯವಾಗಿ ಭಾಗವಹಿಸಲು ಆತನಿಗೆ ಸಾಧ್ಯವಾಗಲಿಲ್ಲ.

ಸತ್ಯದ ಉಪಾಸಕನಿಗೆ ಮೌನವು ಒಂದು ಪ್ರಬಲವಾದ ಅಸ್ತ್ರ ಎಂದುಕೊಂಡು ಆತನು ಸಾಂತ್ವನ ಪಡೆದುಕೊಂಡನು. ಅಂತೆಯೆ ಅಸತ್ಯವನ್ನು ನುಡಿಯದಂತೆ ಅದು ಅವನನ್ನು ತಡೆಯುತ್ತಿತ್ತು.

1891 ರ ಜೂನ್ 10 ನೆಯ ದಿನಾಂಕ ಮೋಹನನು ಕೊನೆಯ ಒಂಬತ್ತು ತಿಂಗಳ ಅವಧಿಯ ಸತತ ಅಭ್ಯಾಸದ ನಂತರ ನ್ಯಾಯಶಾಸ್ತ್ರದ ಪದವಿಯನ್ನು ಪಡೆದನು. ಎಲ್ಲ ಪರೀಕ್ಷೆಗಳಲ್ಲಿ





ಉತ್ತೀರ್ಣನಾಗಿ ಇಂಗ್ಲೆಂಡ್‌ನ ಉಚ್ಚ ನ್ಯಾಯಾಲಯದ ವಕೀಲರ ಪಟ್ಟಿಯಲ್ಲಿ ಅವನೂ ಸೇರಿದನು. ಈಗ ಅವನೊಬ್ಬ ಪರಿಪೂರ್ಣ ಬ್ಯಾರಿಸ್ಟರ್ ಆದನು.

ಅವನು ಮರುದಿನವೇ ಇಂಗ್ಲೆಂಡ್‌ನಿಂದ ತೆರಳಲಿದ್ದ ಕಾರಣ ಆ ದಿನ ಅವನು ತನ್ನ ಶಾಕಾಹಾರಿಗಳಾದ ಮಿತ್ರರನ್ನು ವಿದಾಯಭೋಜನಕ್ಕೆ ಆಮಂತ್ರಿಸಿದನು. ಅದರಲ್ಲಿ ಭಾಷಣಗಳಂತೂ ಜರುಗಲೇಬೇಕು. ಮೋಹನನು ಶ್ರದ್ಧೆಯಿಂದ ಸಿದ್ಧತೆಯನ್ನು ಕೈಕೊಂಡು ಭಾಷಣವನ್ನು ಕಂಠಪಾಠಮಾಡಿದನು. ಆದರೆ ಪ್ರತ್ಯಕ್ಷವಾಗಿ ಮಾತನಾಡಲು ನಿಂತಾಗ ಅವನು ಎದೆಗುಂದಿದನು. ಶಬ್ದಗಳಿಗಾಗಿ ಚಡಪಡಿಸುತ್ತ ಮೊದಲಿನ ವಾಕ್ಯವನ್ನೆ ಮತ್ತೆ ಮತ್ತೆ ಹೇಳತೊಡಗಿದನು. ಅತ್ತ ವಿನೋದವನ್ನು ಮಾಡಬೇಕೆಂಬ ಅವನ ವಿಚಾರವು ಕೂಡ ನಿಷ್ಫಲವಾಯಿತು. ಗೊಂದಲಗೆಟ್ಟು ಕೊನೆಗೆ ಅವನು ಕುಳಿತುಕೊಂಡನು. ಆತನಿಗೆ ಅದೊಂದು ಹೃದಯಭೇದಕವಾದ ಅನುಭವವಾಯಿತು.

ಭಾರತಕ್ಕೆಂದು ಅವನು ಹಡಗಿನಲ್ಲಿ ಹೊರಟಾಗ ಅವನ ಮನಸ್ಸಿನಲ್ಲಿ ಶಾಂತಿಯಿರಲಿಲ್ಲ. ತಾನು ನ್ಯಾಯಶಾಸ್ತ್ರದ ಪರೀಕ್ಷೆಗಳಲ್ಲಿ ಯಶಸ್ಸನ್ನು ಪಡೆದು ಬ್ಯಾರಿಸ್ಟರ್ ಆದುದೇನೋ ನಿಜ; ಆದರೆ ಭಾರತದಲ್ಲಿ ತಾನು ಯಶಸ್ವಿಯಾಗಬಹುದೆ? ಯಾವಾಗಲೂ ಅಷ್ಟೊಂದು ಸ್ನೇಹಪರರಲ್ಲದ ಜನರ ಮುಂದೆ ವಾದಮಾಡಬೇಕಾದ ತಾನು ಭಾರತೀಯ ನ್ಯಾಯಾಲಯಗಳಲ್ಲಿ ವಕೀಲಿಯನ್ನು ನಡೆಸಬಹುದೆ? ಅದೂ ಅಲ್ಲದೆ ಭಾರತದ ನ್ಯಾಯಶಾಸ್ತ್ರವನ್ನು ತಾನು ತಿಳಿದುದಾದರೂ ಎಷ್ಟು?





ಈ ಎಲ್ಲ ವಿಚಾರಗಳಿಂದ ಅವನ ಮನಸ್ಸು ಕದಡಿ ಲಂಡನ್‌ನಲ್ಲಿ ತಾನು ಪಡೆದ ಯಶಸ್ಸಿನ ಬಗ್ಗೆ ಉತ್ಸಾಹವನ್ನು ಕುಗ್ಗಿಸಿತು. ಆದರೂ ತಾಯಿಯನ್ನು ಭೆಟ್ಟಿಯಾಗಿ ತಾನು ಕೊಟ್ಟ ವಚನವನ್ನು ಪಾಲಿಸಿದುದನ್ನು ಹೇಳುವ ವಿಚಾರವಂತೂ ಇದ್ದಿತ್ತಲ್ಲ. ಆಕೆಯ ಬಗ್ಗೆ ಆತನಿಗೆ ಅದೆಷ್ಟು ಪ್ರೀತಿ !

ಮುಂಬಯಿಯನ್ನು ತಲುಪಿದೊಡನೆ ತನ್ನ ತಾಯಿಯು ತೀರಿಕೊಂಡ ಸುದ್ದಿಯು ಮೋಹನನಿಗೆ ತಿಳಿಯಿತು. ಅವನು ಕಂಗೆಟ್ಟರೂ "ನಾನೇನು ದುಃಖಪ್ರದರ್ಶನದ ಗೊಡವೆಗೆ ಹೋಗಲಿಲ್ಲ. ಕಂಬನಿಗಳನ್ನು ತಡೆದು, ಏನೂ

ಸಂಭವಿಸಿಲ್ಲ ಎಂಬಂತೆ ಜೀವನವನ್ನು ಸಾಗಿಸಿದೆನು "ಎಂದು ಆಮೇಲೆ ಬರೆದಿರುವನು. ಇಂಗ್ಲೆಂಡ್‌ನಲ್ಲಿ ಆತ್ಮಸಂಯಮದ ಅಭ್ಯಾಸವನ್ನು ಮಾಡಿದುದರ ಫಲವಾಗಿತ್ತು ಅದು.

ರಾಜಕೋಟ್‌ನಲ್ಲಿ ಕೆಲದಿನ ಇದ್ದನಂತರ ವಕೀಲಿಯ ವೃತ್ತಿಯನ್ನು ನಡೆಸಲಿಕ್ಕೆಂದು ಆತನು ಮುಂಬಯಿಗೆ ತಿರುಗಿ ಬಂದನು. ಕೆಳಗಿನ ನ್ಯಾಯಾಲಯದಲ್ಲಿ ಅವನು ಕೈಕೊಂಡ ಮೊದಲನೆಯ ಮೊಕದ್ದಮೆಯ ವಾದವು ನಡೆಯಿತು. ಅದರಲ್ಲಿ ಗಾಂಧೀಜಿಯವರಿಗೆ ಮುವ್ವತ್ತು ರೂಪಾಯಿಗಳ ಶುಲ್ಕವು ಲಭಿಸಿತು.

ಒಬ್ಬ ಸಾಕ್ಷಿಯನ್ನು ಪ್ರಶ್ನಿಸಬೇಕಾದಾಗ ಮಾತ್ರ ಅವನ ಬಾಯಿಗೆ ಶಬ್ದಗಳೇ ಬರಲಿಲ್ಲ. ಆತನು ಆರಂಭವನ್ನು ಕೂಡ ಮಾಡದಾದನು. ನ್ಯಾಯಾಲಯದಲ್ಲಿ ವಿಚಿತ್ರವಾದ ಶಾಂತಿಯು ಹರಡಿತ್ತು. ಗಾಂಧೀಜಿಯು ನಡುಗಿದರು, ಅವಮಾನಪಟ್ಟರು. ಕೊನೆಯಲ್ಲಿ ಸೋಲನ್ನೊಪ್ಪಿ ಕುಳಿತಾಗ ನ್ಯಾಯಾಲಯದಲ್ಲಿ ಎಲ್ಲರೂ ಅವರನ್ನು ನೋಡಿ ನಕ್ಕರು.

ಗಾಂಧೀಜಿಯವರು ರಾಜಕೋಟಕ್ಕೆ ಮರಳಿ ಬಂದರೆ ಅಲ್ಲಿ ಅವರಿಗಾಗಿ ತೊಂದರೆಯು ಕಾಯ್ದುಕೊಂಡಿತ್ತು. ಅವರ ಸಹೋದರನ ವಿರುದ್ಧ ಒಂದು ಪ್ರಕರಣವು ನಡೆದಿದ್ದು ಅದರಲ್ಲಿ ಗಾಂಧೀಜಿಯವರ ನೆರವು ಬೇಕಿತ್ತು. ತನಗೆ ಇಷ್ಟವಾಗಿರದಿದ್ದರೂ ಗಾಂಧೀಜಿಯವರು ಬ್ರಿಟಿಷ್ ರಾಜಕೀಯ ಅಧಿಕಾರಿಯ (ರಾಜಕೋಟದಲ್ಲಿ ವೈಸರಾಯನ ಪ್ರತಿನಿಧಿಯ) ಎದುರಿಗೆ



ತಮ್ಮ ಸಹೋದರನ ಪರವಾಗಿ ಮಾತನಾಡಬೇಕಾಯಿತು ; ಈ ಇಂಗ್ಲಿಷ್ ಸದ್ಗೃಹಸ್ಥನನ್ನು ಅವರು ಒಮ್ಮೆ ಇಂಗ್ಲೆಂಡ್‌ನಲ್ಲಿ ಭೆಟ್ಟಿಯಾಗಿದ್ದರು.

ಆ ಅಧಿಕಾರಿಯನ್ನು ಗಾಂಧೀಜಿಯವರು ನೋಡಹೋದಾಗ್ಗೆ ಆತನು ಅವರೊಡನೆ ಒರಟಾಗಿ ನಡೆದುಕೊಂಡನು. ಆ ಅಧಿಕಾರಿಯು ಗಾಂಧೀಜಿಯವರ ಮಾತನ್ನು ಕೇಳಲಿಕ್ಕೆ ಕೂಡ ಒಪ್ಪಲಿಲ್ಲ ಮತ್ತು ಅವರಿಗೆ ಹೊರಟುಹೋಗುವಂತೆ ಹೇಳಿದನು. ಗಾಂಧೀಜಿಯವರು ತಮಗೆ ಹೇಳಬೇಕಾದುದನ್ನು ಹಟದಿಂದ ಹೇಳತೊಡಗಿದಾಗ್ಗೆ ಅಧಿಕಾರಿಯು ತನ್ನ ಸೇವಕನ ಕೈಯಿಂದ ಕೋಣೆಯ ಹೊರಗೆ ಅವರನ್ನು ದಬ್ಬಿಸಿದನು.

ಇಷ್ಟು ದೊಡ್ಡದಾದ ಅಪಮಾನವು, ಭಾರತದಲ್ಲಿ ಬ್ರಿಟಿಷರು ಅನುಸರಿಸಿದ ನಿರ್ದಯವಾದ ನೀತಿಯನ್ನು ಗಾಂಧೀಜಿಯವರಿಗೆ ನಿಚ್ಚಳವಾಗಿ ತೋರಿಸಿಕೊಟ್ಟಿತು. "ಈ ಆಘಾತವು ನನ್ನ ಬಾಳಿನ ದಾರಿಯನ್ನೆ ಬದಲಿಸಿತು" ಎಂದರವರು.

ಅಂತೆಯೇ ದಕ್ಷಿಣ ಆಫ್ರಿಕಾದಲ್ಲಿ ಒಂದು ಭಾರತೀಯ ಸಂಸ್ಥೆಗೆ ಒಂದು ವರ್ಷದ ಮಟ್ಟಿಗೆ ಕಾನೂನು ಸಲಹೆಗಾರರಾಗಲಿಕ್ಕೆ ಕೇಳಿಕೊಂಡಾಗ್ಗೆ ಅವರು ಸಂತೋಷದಿಂದ ಆ ಕರೆಯನ್ನು ಸ್ವೀಕರಿಸಿದರು. 1893 ರ ಏಪ್ರಿಲ್‌ನಲ್ಲಿ ಅವರು ಮುಂಬಯಿಯಿಂದ ಹಡಗದಲ್ಲಿ ಹೊರಟು ಒಂದು ತಿಂಗಳ ನಂತರ ದಕ್ಷಿಣ ಆಫ್ರಿಕಾದ ನಾಟಾಲವನ್ನು ತಲುಪಿದರು.





ದಕ್ಷಿಣ ಆಫ್ರಿಕಾದಲ್ಲಿ ನಡೆಯುತ್ತಿದ್ದುದನ್ನು ಕಂಡು ಗಾಂಧೀಜಿಯವರು ನೊಂದುಕೊಂಡರು. ಅವರ ಸ್ವದೇಶ ಬಾಂಧವರನ್ನು ಅಲ್ಲಿ ಕೀಳಾಗಿ ನಡೆಯಿಸಿಕೊಳ್ಳುತ್ತಿದ್ದರು ಮತ್ತು ಕಡೆಗಣಿಸುತ್ತಿದ್ದರು. ಅಲ್ಲಿ ಅವರಿಗೆ ಯಾವ ಹಕ್ಕುಗಳೂ ಇರಲಿಲ್ಲ. ಅವರು ದಕ್ಷಿಣ ಆಫ್ರಿಕಾದ ಯೂರೋಪಿಯನ್‌ರೊಡನೆ ಸೇರುವಂತಿರಲಿಲ್ಲ. ಅವರ ಕಂದು ಬಣ್ಣವು ಕಲಂಕವೆಂಬಂತೆ ತೋರುತ್ತಿತ್ತು. ಅವರಲ್ಲಿ ಬಹುಜನರನ್ನು ತಿರಸ್ಕಾರದ ಶಬ್ದವಾದ "ಕೂಲಿ" ಎಂದು ಕರೆಯುತ್ತಿದ್ದರು. ಗಾಂಧೀಜಿಯವರನ್ನು "ಕೂಲಿ" ಬ್ಯಾರಿಸ್ಟರ್ ಎಂದು ಸಂಬೋಧಿಸುತ್ತಿದ್ದರು.



ಪ್ರತ್ಯಕ್ಷವಾಗಿ ಅದರ ಅರ್ಥವೇನು ಎಂಬುದನ್ನು ಗಾಂಧೀಜಿಯವರು ಕೂಡಲೇ ಅನುಭವಿಸಿದರು. ರೈಲಿನಲ್ಲಿ ಅವರು ಪ್ರಿಟೋರಿಯಾಕ್ಕೆ ಹೊರಟಿದ್ದರು. ಅವರ ಬಳಿಯಲ್ಲಿ ಮೊದಲನೆ ದರ್ಜೆಯ ಟಿಕೆಟ್ಟು ಇದ್ದು ಅವರು ಮೊದಲನೆಯ ದರ್ಜೆಯ ಡಬ್ಬಿಯಲ್ಲಿ ಕುಳಿತಿದ್ದರು. ಆದರೆ ಅದು ಹೆಚ್ಚು ಹೊತ್ತು ನಡೆಯಲಿಲ್ಲ. ಒಂದು ನಿಲ್ದಾಣದಲ್ಲಿ ಬಂಡಿಯು ನಿಂತಾಗ್ಗೆ ಒಬ್ಬ ಯುರೋಪಿಯನ್ ಪ್ರವಾಸಿಗನು ಬಂದನು. ಕಪ್ಪುಬಣ್ಣದ ವ್ಯಕ್ತಿಯು ಒಳಗೆ ಕುಳಿತಂದನ್ನು ನೋಡಿ ಅವನು ರೇಲ್ವೆಯ ಅಧಿಕಾರಿಗಳಲ್ಲಿ ಆ ಬಗ್ಗೆ ದೂರುಹೇಳಿದನು.

ಗಾಂಧೀಜಿಯವರಿಗೆ ಆ ಅಧಿಕಾರಿಗಳು ಅಲ್ಲಿಂದ ಇಳಿಯಲಿಕ್ಕೆ ಹೇಳಿ ಸಾಮಾನುಗಳ ಡಬ್ಬಿಯಲ್ಲಿ ಪ್ರವಾಸಮಾಡಲಿಕ್ಕೆ ಕಳಿಸಹೋದರು. "ನನ್ನ ಬಳಿ ಮೊದಲನೆಯ ದರ್ಜೆಯ ಟಿಕೆಟ್ಟು ಇದೆಯಲ್ಲ" ಎಂದರು ಅವರು. ಅಷ್ಟರಲ್ಲಿ ಒಬ್ಬ ಪೋಲೀಸನು ಬಂದು ಅವರನ್ನು ಹಿಡಿದು ಹೊರಗೆ ನೂಕಿದನು. ಆಗ್ಗೆ ರಾತ್ರಿಯ ಒಂಬತ್ತು ಗಂಟೆಯಾಗಿದ್ದು ಅತ್ಯಂತ ಚಳಿಯಿದ್ದಿತು. ಇರುಳೆಲ್ಲ ಅವರು ನಡುಗುತ್ತ ಪ್ರತೀಕ್ಷಾಗೃಹದಲ್ಲಿ ಕುಳಿತುಕೊಂಡರು.

ಮರುದಿನ ಮುಂಜಾವಿನಲ್ಲಿ ಗಾಂಧೀಜಿಯವರು ಚಾರ್ಲ್ಸ್‌ಟೌನಿಗೆ ರೈಲಿನಲ್ಲಿ ಹೋಗಿ ಅಲ್ಲಿಂದ ಜೋಹಾನ್ಸ್‌ಬರ್ಗಕ್ಕೆ ತೆರಳಲಿಕ್ಕೆಂದು ಕುದುರೆಗಾಡಿಯ ಟಿಕೆಟ್ಟನ್ನು ತೆಗೆದುಕೊಂಡರು. ಅಲ್ಲಿಯೂ ಕೂಡ ಬಿಳಿಯ ಪ್ರವಾಸಿಕರು ಗಾಡಿಯೊಳಗೆ ಇದ್ದಕಾರಣ ಅವರಿಗೆ ಚಾಲಕನ ಬಳಿಯಲ್ಲಿ ಕುಳಿತು ಬರುವಂತೆ ಹೇಳಿದರು.

ಪರಿಸ್ಥಿತಿಯು ಶಾಂತವಾಗಿರಲೆಂದು ಅವರು ಹಾಗೆಯೆ ಮಾಡಿದರು. ದಾರಿಯಲ್ಲಿ ಒಂದು





ನಿಲ್ದಾಣ ಬಂದಾಗ್ಗೆ ಒಬ್ಬ ಬಿಳಿಯನು ಗಾಂಧೀಜಿಯವರಿಗೆ ತಮ್ಮ ಆಸನವನ್ನು ತನಗೆ ಕೊಟ್ಟು ಅವರು ಕೊಳಕು ಬಟ್ಟೆಯೊಂದನ್ನು ಹಾಸಿದ ಕಾಲುಮಣೆಯಮೇಲೆ ಕುಳಿತು ಬರುವಂತೆ ನಿರ್ದಯನಾಗಿ ಆಜ್ಞಾಪಿಸಿದನು.

ಗಾಂಧೀಜಿಯವರು ಈ ಮಾತಿಗೆ ಒಪ್ಪಲಿಲ್ಲವಾದ ಕಾರಣ ಸಿಟ್ಟಾದ ಆ ಬಿಳಿಯನು ಅವರ ಕೈಯನ್ನು ಹಿಡಿದು ಕೆಳಗೆ ಎಳೆಯಹೋದನು; ಸಾಲದುದಕ್ಕೆ ಅವರನ್ನು ಹೊಡೆದನು. ಅದೊಂದು ಕಾಡುನಡತೆಯ ನೋಟವಾಗಿತ್ತು. ಸುದೈವದಿಂದ ಮಿಕ್ಕವರು ಅವರ ರಕ್ಷಣೆಗಾಗಿ ಬಂದರೆಂದು ಅವರು ತಮ್ಮ ಆಸನವನ್ನು ಇಟ್ಟುಕೊಂಡರಲ್ಲದೆ ನಿರಾತಂಕವಾಗಿ ಪ್ರವಾಸವನ್ನು ಮುಂದುವರಿಸಿದರು.

ಈ ಅಸಂತೋಷದ ಅನುಭವಗಳು ಗಾಂಧೀಜಿಯವರ ಮನಸ್ಸಿನಲ್ಲಿ ದಕ್ಷಿಣ ಆಫ್ರಿಕಾದೊಳಗಿನ ತನ್ನ ಜನರ ತೊಂದರೆಗಳನ್ನು ಕೊನೆಗೊಳಿಸಬೇಕೆಂಬ ಪ್ರಬಲವಾದ ಇಚ್ಛೆಯನ್ನು ಹುಟ್ಟಿಸಿದವು. ಪ್ರಿಟೋರಿಯವನ್ನು ತಲುಪಿದೊಡನೆ ಅವರು ಎಲ್ಲ ಭಾರತೀಯರನ್ನು ಭೇಟಿಯಾಗತೊಡಗಿದರು.

ಒಟ್ಟೊಬ್ಬರನ್ನಾಗಿ ಬಿಳಿಯರು ಸುಲಭವಾಗಿ ಹೆದರಿಸಬಹುದಾದ ಕಾರಣ ಭಾರತೀಯರಲ್ಲಿ ಐಕಮತ್ಯವನ್ನುಂಟುಮಾಡಬೇಕೆಂದು ಅವರು ಯೋಚಿಸಿದರು.

ಅವರ ಪ್ರಯತ್ನಗಳ ಪರಿಣಾಮವಾಗಿ ಎಲ್ಲ ಭಾರತೀಯರ ಒಂದು ಸಭೆಯು ಜರುಗಿತು. ಅಲ್ಲಿ ಗಾಂಧೀಜಿಯವರು ತಮ್ಮ ಮೊದಲನೆಯ ಸಾರ್ವಜನಿಕ ಭಾಷಣವನ್ನು ಮಾಡಿದರು. ಒಗ್ಗಟ್ಟಿನ ಆವಶ್ಯಕತೆಯ ಬಗ್ಗೆ ಮಾತನಾಡಿದರಲ್ಲದೆ ವ್ಯವಹಾರದಲ್ಲಿ ಸತ್ಯನಿಷ್ಠರಾಗಿರಬೇಕು, ಸ್ವಚ್ಛ ಹಾಗೂ ನಿರ್ಮಲವಾದ ರೀತಿಯಲ್ಲಿ ಎಲ್ಲರೂ ಇರಬೇಕು ಎಂದು ಸೂಚಿಸಿದರು. ಕೊನೆಯದಾಗಿ ತಮ್ಮದೇ ಆದ ಒಂದು ಸಂಘವನ್ನು ರಚಿಸಿಕೊಳ್ಳಬೇಕು ಮತ್ತು ಅವರು ಪಡುತ್ತಿರುವ ಕಷ್ಟಗಳನ್ನು ತಪ್ಪಿಸಬೇಕು ಎಂದರು.

ಗಾಂಧೀಜಿಯವರು ಒಂದು ವರ್ಷದಮಟ್ಟಿಗೆ ದಕ್ಷಿಣ ಆಫ್ರಿಕಾಗೆ ಬಂದಿದ್ದರು. ಆದರೆ ಮುಂದೆ ಕೂಡ ಅವರ ಸಹಾಯವು ಅಗತ್ಯವಾಗಿದ್ದಕಾರಣ ಅವರು ಮೂರುವರ್ಷಗಳವರೆಗೆ ಅಲ್ಲಿ ವಾಸಿಸಿದರು.

ತಾವು ದಕ್ಷಿಣ ಆಫ್ರಿಕೆಗೆ ಬಂದ ಖಟ್ಲೆಯನ್ನು ಗಾಂಧೀಜಿಯವರು ಇಬ್ಬರೂ ಪಕ್ಷಕಾರರ ಒಮ್ಮತದಿಂದ ತಾವೇ ನಿರ್ಧರಿಸಿದರು.

ಹಾಗೆಯೆ ಅನೇಕ ಭಾರತೀಯರ ನ್ಯಾಯಾಲಯದ ಕೆಲಸಗಳಲ್ಲಿ ಅವರು ನೆರವನ್ನು ನೀಡಿದರು. ಬಾಲಸುಂದರಮ್ ಎಂಬ ಕೆಲಸಗಾರನನ್ನು ಯೂರೋಪಿಯನ್ ಒಡೆಯನು ದುಸ್ಸಹವಾಗಿ





ಹೊಡೆದುದೊಂದು ಸುಪ್ರಸಿದ್ಧವಾದ ಪ್ರಕರಣವಾಗಿತ್ತು. ಆ ಸಂದರ್ಭದಲ್ಲಿ ಗಾಂಧೀಜಿಯವರು ಅವನನ್ನು ಕಡಿಮೆ ಕ್ರೂರಿಯಾದ ಒಡೆಯನತ್ತ ವರ್ಗಮಾಡಿಸಿದರು.

1896 ರಲ್ಲಿ ಅವರು ಭಾರತಕ್ಕೆ ತಿರುಗಿ ತಮ್ಮ ಕುಟುಂಬದ ಜನರನ್ನು ಕರೆದೊಯ್ಯಲಿಕ್ಕೆ ಮತ್ತು ದಕ್ಷಿಣ ಆಫ್ರಿಕೆಯಲ್ಲಿ ತಮ್ಮವರು ಪಡುತ್ತಿರುವ ತೊಂದರೆಗಳ ವರ್ತಮಾನವನ್ನು ಹರಡಲಿಕ್ಕೆ ಬಂದರು. ಆ ವರ್ಷದ ಡಿಸೆಂಬರ್ ತಿಂಗಳಲ್ಲಿ ದರಬಾನಕ್ಕೆ ಕೂಡಲೇ ಹಿಂತಿರುಗುವಂತೆ ಗಾಂಧೀಜಿಯವರಿಗೆ ಒಂದು ತಂತಿಯು ಬಂದಿತು. ಅಂತೆಯೆ ತಮ್ಮ ಹೆಂಡತಿ, ಇಬ್ಬರು ಮಕ್ಕಳು ಮತ್ತು ಒಬ್ಬ ಸಹೋದರನ ಮಗನೊಂದಿಗೆ ಅವರು ಮರಳಿ ತೆರಳಿದರು.

ಭಾರತದಲ್ಲಿ ಅವರು ಮಾಡಿದ ಭಾಷಣಗಳು ಬಿಳಿಯ ಜನರನ್ನು ಕೆರಳಿಸಿದ್ದವು. ಗಾಂಧೀಜಿಯವರು ಹಡಗಿನಿಂದ ಆಫ್ರಿಕಾದಲ್ಲಿ ಇಳಿಯದಂತೆ ಅವರೆಲ್ಲರೂ ವಿಶ್ವಪ್ರಯತ್ನ ಮಾಡಿದರು. ಅವರು ಮತ್ತು ಇತರ 800 ಮಂದಿ ಭಾರತೀಯರು ಬಂದ ಎರಡೂ ಹಡಗುಗಳು ಬಂದರದಲ್ಲಿ 25 ದಿನ ತಡೆಯಬೇಕಾಯಿತು.



ಹಡಗುಗಳ ಒಡೆಯರಾದ ದಾದಾ ಅಬ್ದುಲ್ಲಾ ಕಂಪನಿಯವರಿಗೆ ಅವುಗಳನ್ನು ತಿರುಗಿ ಕಳಿಸಲಿಕ್ಕೆ ಹೇಳಿದಾಗ್ಗೆ ಕೂಡ ಅವರು ಅದಕ್ಕೆ ಒಪ್ಪಲಿಲ್ಲ.

ಪ್ರವಾಸಿಗರು ಕೆಳಗೆ ಬರಲಿಕ್ಕೆ ಅಪ್ಪಣೆಯನ್ನು ಪಡೆದರೂ ಅವರಿಗೆ ಹಿಂಸಾಚಾರದ ಬೆದರಿಕೆಯನ್ನು ಹಾಕಿದರು. ಕತ್ತಲೆಯಾಗುವವರೆಗೆ ತಡೆಯಬೇಕೆಂದು ಗಾಂಧೀಜಿಯವರನ್ನು ಕೇಳಿಕೊಳ್ಳಲಾಯಿತು. ಆದರೆ ಆ ರೀತಿಯಾಗಿ ಅವಮಾನಿತರಾಗಲಿಕ್ಕೆ ಅವರು ಒಪ್ಪಲಿಲ್ಲ. ದಿನದ ಬೆಳಕಿನಲ್ಲಿಯೆ ಅವರು ಒಬ್ಬ ಯೂರೋಪಿಯನ್ ವಕೀಲ ಮಿತ್ರನೊಂದಿಗೆ ದಂಡೆಯಮೇಲೆ ಕಾಲಿಟ್ಟರು. ಕೂಡಲೆ ತೊಂದರೆಯು ತಲೆದೋರಿತು.

ಅವರಮೇಲೆ ಕಲ್ಲುಗಳನ್ನು ಎಸೆದ ಕೆಲಜನ ಹುಡುಗರನ್ನು ಅಲ್ಲಿಂದ ಓಡಿಸಲಾಯಿತು. ದಾರಿಯಲ್ಲಿ ನಡೆಯುತ್ತಿದ್ದಂತೆ ಅವರ ಹಿಂದೆ ಜನರ ಗುಂಪೊಂದು ಸೇರಿ ಅವರನ್ನು ಬೆಂಬತ್ತಿತು. ಒಮ್ಮೆಲೆ ಒಬ್ಬ ದಡಿಯನಾದ ಒರಟು ಮನುಷ್ಯನು ಗಾಂಧೀಜಿಯವರ ಮುಖದ ಮೇಲೆ ಗುದ್ದಿದನು, ಅವರನ್ನು ಒದ್ದನು. ಮಿಕ್ಕವರು ಅವರಮೇಲೆ ಕಲ್ಲುಗಳನ್ನು ಎಸೆದರು, ಅವರ



ರುಮಾಲನ್ನು ಹರಿದೊಗೆದರು. ಗಾಯಗೊಂಡು, ಎಚ್ಚರವಿಲ್ಲದಂತಾಗಿ ಗಾಂಧೀಜಿಯವರು ಒಂದು ಮನೆಯ ಕಟಾಂಜನವನ್ನು ಆಧಾರಕ್ಕೆ ಹಿಡಿದುಕೊಂಡು ನಿಂತು ಕೆಲ ಸಮಯದ ತರುವಾಯ ಮತ್ತೆ ನಡೆಯತೊಡಗಿದರು.

ಪೋಲೀಸ್ ಮೇಲಧಿಕಾರಿಯೊಬ್ಬನ ಪತ್ನಿಯು ಆಗ್ಗೆ ಆ ಮಾರ್ಗದಲ್ಲಿ ಹೊರಟಿದ್ದಳು. ಅವಳಿಗೆ ಗಾಂಧೀಜಿಯವರ ಪರಿಚಯವಿದ್ದ ಕಾರಣ ಆಕೆಯು ಧೈರ್ಯದಿಂದ ಅವರ ರಕ್ಷಣೆಗಾಗಿ ತನ್ನ ಕೊಡೆಯನ್ನು ತೆರೆದಳು. ಅನಂತರ ಇಬ್ಬರೂ ಮುಂದೆ ಸಾಗಿದರು. ಅವರು ಪೋಲೀಸ್ ಚೌಕಿಯನ್ನು ತಲುಪಿದರು. ಅಲ್ಲಿಂದ ಯಾವ ತೊಂದರೆಯೂ ಇಲ್ಲದೆ ಗಾಂಧೀಜಿಯವರು ಒಬ್ಬ ಸ್ನೇಹಿತನ ಮನೆಗೆ ತೆರಳಿದರು.



ಗಾಂಧೀಜಿಯವರು ಅಲ್ಲಿ ನಾಟಾಲ ಭಾರತೀಯ ಕಾಂಗ್ರೆಸ್‌ನ್ನು ಸಂಘಟಿಸಿ, ಕೆಲಸಗಾರರಿಗೆ ಸಹಾಯವನ್ನು ಸಲ್ಲಿಸುವ ತಮ್ಮ ಕಾರ್ಯವನ್ನು ಮುಂದುವರಿಸಿದರು. 1901 ರ ಕೊನೆಯಲ್ಲಿ ಅವರು ಭಾರತಕ್ಕೆ ಮರಳುವಾಗ್ಗೆ ತಮ್ಮ ಆವಶ್ಯಕತೆಯಿದ್ದರೆ ಮತ್ತೆ ದಕ್ಷಿಣ ಆಫ್ರಿಕಾಗೆ ಬರುವುದಾಗಿ ವಚನವಿತ್ತರು.

1902 ರಲ್ಲಿ ತಂತಿಯೊಂದು ಬಂದಕೂಡಲೆ ತಮ್ಮ ಮಾತಿಗೆ ಅನುಗುಣವಾಗಿ ಅವರು ಅತ್ತ ಧಾವಿಸಿದರು. ಈ ಬಾರಿ 12 ವರ್ಷಗಳ ವರೆಗೆ ಅವರಿಗೆ ಭಾರತಕ್ಕೆ ಬರುವುದಾಗಲಿಲ್ಲ.

ಅಪ್ಪಣೆಯಿಲ್ಲದೆ ಟ್ರಾನ್ಸ್‌ವಾಲ್‌ನ್ನು ಭಾರತೀಯರು ಪ್ರವೇಶಿಸುವಂತಿರಲಿಲ್ಲ. ಅವರ ಪರವಾಗಿ ಕಾರ್ಯವನ್ನು ಕೈಕೊಳ್ಳುವದಾಗಿ ಗಾಂಧೀಜಿಯವರು ನಿರ್ಧರಿಸಿದರು. ಜೋಹಾನ್ಸ್‌ಬರ್ಗ್‌ನಲ್ಲಿ ಅವರು ತಮ್ಮ ವಕೀಲಿ ವೃತ್ತಿಯನ್ನು ಆರಂಭಿಸಿದರು. ಆ ಸ್ಥಳದಿಂದ ಅವರು ತಮ್ಮ ದೇಶಬಾಂಧವರ ಕಷ್ಟಗಳನ್ನು ದೂರಮಾಡುವ ಕಾರ್ಯವನ್ನು ಕೈಗೊಂಡರು.



1906 ರ ಆಗಸ್ಟ್ 22 ನೆಯ ದಿನಾಂಕ ಟ್ರಾನ್ಸ್‌ವಾಲ ಸರಕಾರವು ಎಂಟುವರ್ಷಗಳಿಗೆ ಮೇಲ್ಪಟ್ಟ ಎಲ್ಲ ಭಾರತೀಯರು ತಮ್ಮ ಹೆಸರನ್ನು ಕಡ್ಡಾಯವಾಗಿ ದಾಖಲೆ ಮಾಡಿಸಬೇಕೆಂಬ ಸುಗ್ರೀವಾಜ್ಞೆಯನ್ನು ಸಾರಿತು. ಪ್ರತಿಯೊಬ್ಬನು ಸರಕಾರದ ಕಾರ್ಯಾಲಯಕ್ಕೆ ಹೋಗಿ ಹೆಸರು, ವಿಳಾಸ, ಜಾತಿ, ವಯಸ್ಸು ಮತ್ತು ಮಾಡುವ ಕೆಲಸ ಮುಂತಾದವುಗಳನ್ನು ಹೇಳಬೇಕಾಗಿತ್ತು. ಅವರ ಬೆರಳಿನ ಗುರುತನ್ನು ತೆಗೆದುಕೊಳ್ಳುತ್ತಿದ್ದರು ಮತ್ತು ಇತರ ಪರಿಚಯದ ಚಿನ್ಹೆಗಳನ್ನು ಬರೆದುಕೊಳ್ಳುತ್ತಿದ್ದರು. ಎಲ್ಲ ಭಾರತೀಯರು ಯಾವಾಗಲೂ ಪ್ರಮಾಣ ಪತ್ರಗಳನ್ನು ಕೈಯಲ್ಲಿ ಹಿಡಿದುಕೊಂಡು ಹೋಗಬೇಕಾಗಿತ್ತು ಮತ್ತು ಮಾರ್ಗಗಳಲ್ಲಿ ಕೂಡ ಕೇಳಿದರೆ ಅವುಗಳನ್ನು ತೋರಿಸಬೇಕಾಗುತ್ತಿತ್ತು. ಹಾಗೆ ಮಾಡಲು ತಪ್ಪಿದವರನ್ನು ದಂಡಿಸುತ್ತಿದ್ದರು. ಸೆರೆಮನೆಗೆ ಕಳಿಸುತ್ತಿದ್ದರು ಇಲ್ಲವೆ ದೇಶದಿಂದ ಹೊರಗೆ ಹಾಕುತ್ತಿದ್ದರು.

ಈ ಸುಗ್ರೀವಾಜ್ಞೆಯು ಭಾರತೀಯರಿಗೆ ಅವಮಾನಕರವಾಗಿದ್ದ ಕಾರಣ ಅದನ್ನು ಎದುರಿಸುವುದಾಗಿ ಅವರೆಲ್ಲರೂ ನಿರ್ಧರಿಸಿದರು. ಜೋಹಾನ್ಸ್‌ಬರ್ಗ್‌ದ ನಾಟಕಮಂದಿರವೊಂದರಲ್ಲಿ 3,000 ಭಾರತೀಯರ ವಿಶಾಲಸಭೆಯಲ್ಲಿ ಅವರು ಗಾಂಧೀಜಿಯವರ ಆಶೀರ್ವಾದಗಳನ್ನು ಪಡೆದು ದೇವರನ್ನು ಸ್ಮರಿಸಿ ದಾಖಲೆ ಮಾಡಿಸುವಂತಿಲ್ಲ ಎಂದು ಶಪಥವನ್ನು ಅಂಗೀಕರಿಸಿ



ದರು. ಆದರೆ ಟ್ರಾನ್ಸ್‌ವಾಲ ಸರಕಾರವು ತನ್ನ ದಾರಿಯುಂತೆಯೇ ಮುಂದೆ ಸಾಗುವ ನಿರ್ಧಾರವನ್ನು ಮಾಡಿತ್ತು.

"ಕಪ್ಪು ಆಜ್ಞೆ" ಯೆಂದು ಕರೆಯಲಾದುದು 1907 ರ ಜುಲೈತಿಂಗಳ ಕೊನೆಯ ದಿನ ಜಾರಿಗೆ ಬಂದಿತು. ಆ ದಿನ ಪ್ರಿಟೋರಿಯದ ಒಂದು ಮಸೀದಿಯಲ್ಲಿ ಭಾರತೀಯರು ದೊಡ್ಡ ಸಂಖ್ಯೆಯಲ್ಲಿ ಸೇರಿದರು. ಅಲ್ಲಿ ಅವರು ತಮ್ಮ ಹೆಸರನ್ನು ದಾಖಲೆ ಮಾಡಿಸುವಂತಿಲ್ಲ ಮತ್ತು ಪ್ರಮಾಣಪತ್ರಗಳನ್ನು ಪಡೆಯುವಂತಿಲ್ಲ ಎಂದು ಮತ್ತೊಮ್ಮೆ ನಿರ್ಧರಿಸಿದರು.

ಅವರು ತಮ್ಮ ಮಾತನ್ನು ನಡೆಸಿದರು. 13,000 ಜನ ಟ್ರಾನ್ಸ್‌ವಾಲಿನ ಭಾರತೀಯರಲ್ಲಿ ಐದುನೂರಕ್ಕಿಂತ ಕಡಮೆ ಜನರು ತಮ್ಮ ಹೆಸರನ್ನು ದಾಖಲೆ ಮಾಡಿಸಿದರು. ಐಕ್ಯವನ್ನು ಎತ್ತಿ ತೋರಿಸಲಿಕ್ಕೆ ಇದೊಂದು ಅದ್ಭುತವಾದ ಪ್ರಸಂಗವೆನಿಸಿತು ಮತ್ತು ಆ ಕಾರಣ ಗಾಂಧೀಜಿಯವರಿಗೆ ಅಪೂರ್ವವಾದ ಯಶಸ್ಸು ದೊರೆಯಿತು.

ಸರಕಾರವು ಪ್ರತಿಭಟಿಸಿತು. ಟ್ರಾನ್ಸ್‌ವಾಲಿನಿಂದ ಹೊರಡುವಂತೆ ಭಾರತೀಯ ಮುಂದಾಳುಗಳಿಗೆ 14 ದಿನಗಳ ಅವಧಿಯನ್ನು ಕೊಟ್ಟರು. ಅದಕ್ಕೆ ಅವರು ಮಣಿಯಲಿಲ್ಲವಾದ ಕಾರಣ ಅವರನ್ನು ಕೈಸೆರೆಮಾಡಿ ನ್ಯಾಯಾಲಯದಲ್ಲಿ ವಿಚಾರಣೆಗೆ ಗುರಿಮಾಡಿದರು. ಗಾಂಧೀಜಿಯವರು



ತಮಗೆ ಅತ್ಯಧಿಕವಾದಶಿಕ್ಷೆಯನ್ನು ವಿಧಿಸುವಂತೆ ಮ್ಯಾಜಿಸ್ಟ್ರೇಟರನ್ನು ಕೇಳಿಕೊಂಡರು. ಅವರಿಗೆ ಎರಡು ತಿಂಗಳ ಕಾರಾಗೃಹ ಶಿಕ್ಷೆಯಾಯಿತು. ಕೂಡಲೆ 150 ಜನ ಭಾರತೀಯರು ಸೆರೆ ಮನೆಯನ್ನು ಸೇರಿದರು.

ಒಂದು ವೃತ್ತಪತ್ರಿಕೆಯ ಸಂಪಾದಕನು ಸಹಾಯವನ್ನು ಕೊಡಲು ಮುಂದೆಬಂದನು. ಗಾಂಧೀಜಿಯವರಿಲ್ಲದೆ ಯಾವ ನಿರ್ಣಯವನ್ನೂ ಕೈಕೊಳ್ಳುವದಿಲ್ಲ ಎಂದು ಭಾರತೀಯ ನಾಯಕರು ಸ್ಪಷ್ಟವಾಗಿ ತಿಳಿಸಿದರು. ಅವರ ಅವಗಾಹನೆಗಾಗಿ ಒಂದು ಲಿಖಿತ ಒಪ್ಪಂದವನ್ನು ಸೆರೆಮನೆಯಲ್ಲಿ ತಂದರು. ಭಾರತೀಯರು ತಾವಾಗಿ ಹೆಸರುಗಳನ್ನು ದಾಖಲೆ ಮಾಡಿಸಿದರೆ "ಕಪ್ಪು ಆಜ್ಞೆ"ಯನ್ನು ರದ್ದುಗೊಳಿಸುವುದಾಗಿ ಸರಕಾರವು ಒಪ್ಪಿತು. ಅವರ ಪ್ರಮಾಣಪತ್ರದ ವಿವರಗಳಿಗಾಗಿ ಭಾರತೀಯರ ಸಲಹೆ ಪಡೆಯಲಾಗುವದು ಎಂಬುದಾಗಿ ಸರಕಾರವು ತಿಳಿಸಿತು.

ಎರಡು ದಿನಗಳನಂತರ ಗಾಂಧೀಜಿಯವರು ಟ್ರಾನ್ಸ್‌ವಾಲದ ಪ್ರಧಾನಮಂತ್ರಿಯಾದ ಜನರಲ್ ಜಾನ್‌ಸ್ಮಟ್ಸ್ ಅವರನ್ನು ಭೆಟ್ಟಿಯಾದರು. ಸ್ಮಟ್ಸ್‌ರು "ಕಪ್ಪು ಆಜ್ಞೆ"ಯನ್ನು ರದ್ದುಗೊಳಿಸುವುದಾಗಿ ವಚನವನ್ನು ಕೊಟ್ಟರು. ಅಂತು ಗಾಂಧೀಜಿಯವರು ಸ್ವತಂತ್ರರಾದರು; ಅತ್ತ ಕಾರಾವಾಸದ ಅವರ ಸಹಚರರನ್ನು ಮರುದಿನ ಬೆಳಗಿನಲ್ಲಿ ಬಿಟ್ಟುಕೊಟ್ಟರು.



ಅವರು ಪ್ರಿಟೋರಿಯಕ್ಕೆ ತಿರುಗಿಬಂದು ನಡುರಾತ್ರಿಯಲ್ಲಿ ಒಂದು ಸಾವಿರ ಜನರ ಸಭೆಯಲ್ಲಿ ಒಪ್ಪಂದವನ್ನು ತಿಳಿಸಿಹೇಳಿದರು. ಅವರಿಗೆ ತರತರದ ಭಯ. ತಾವು "ನೋಂದಣಿ" ಮಾಡಿಸುವ ಮೊದಲು ಆ ಶಾಸನವನ್ನು ತೆಗೆದುಹಾಕಬಾರದೆ? ಸಭ್ಯಗೃಹಸ್ಥರಂತೆ ಈ ಒಪ್ಪಂದ ವನ್ನು ನಡೆಸಿಕೊಡುವ ಆವಶ್ಯಕತೆಯನ್ನು ಗಾಂಧೀಜಿಯವರು ವಿವರಿಸಿದರು. ಅನೇಕರಿಗೆ ಅದು ಅರ್ಥವಾದರೂ ಕೆಲವರಿಗೆ ತಿಳಿಯದೆ ಹೋಯಿತು.

ನಸುಕಿನಲ್ಲಿ ಗಾಂಧೀಜಿಯವರು "ನೋಂದಣಿ" ಮಾಡಿಸುವ ಕಾರ್ಯಾಲಯದತ್ತ ನಡೆದಾಗ ಮೂವರು ಪಠಾಣರು ಅವರ ಹಿಂದಿನಿಂದ ಬಂದು ಅವರ ಮೇಲೆ ಎರಗಿದರು. ಒಮ್ಮೆಲೆ ಅವರಲ್ಲಿ ಒಬ್ಬನು ಗಾಂಧೀಜಿಯವರನ್ನು ಭಾರವಾದ ಕೋಲಿನಿಂದ ಹೊಡೆದನು. ಮಿಕ್ಕವರು ಅವರನ್ನು ಗುದ್ದಿದರು, ಒದ್ದರು. ಆದರಿಂದ ಅವರು, ಎಚ್ಚರತಪ್ಪಿ ಕೆಳಗೆಬಿದ್ದರು.

ಅವರಿಗೆ ಸ್ಮೃತಿಯು ಬಂದಾಗ್ಗೆ ಮೊದಲು ಅವರು ತಮ್ಮನ್ನು ಹೊಡೆದ ಮೀರ್ ಆಲಮನನ್ನು






ಕ್ಷಮಿಸಿದರು. ಅವನನ್ನು ಸೆರೆಹಿಡಿದುದು ತಿಳಿದಕೂಡಲೆ ಅವರು ಅವನ ಬಿಡುಗಡೆಗಾಗಿ ಬಿನ್ನವಿಸಿಕೊಂಡರು.

ಇಂತಹ ಬೇರೆ ಗಂಡಾಂತರಗಳನ್ನು ಗಾಂಧೀಜಿಯವರು ಶಾಂತವಾಗಿ ಧೈರ್ಯದಿಂದ ಎದುರಿಸಿದರು. ಜೋಹಾನ್ಸ್‌ಬರ್ಗ್‌ನಲ್ಲಿ ಒಂದು ಬೃಹತ್ ಸಭೆಯ ತರುವಾಯ ಹೊರಗೆ ಬಂದಾಗ ಅವರು ಹೆಬ್ಬಾಗಿಲ ಮರೆಯಲ್ಲಿ ಒಬ್ಬ ವ್ಯಕ್ತಿಯು ನಿಂತುದನ್ನು ಕಂಡರು. ಅವರು ಅವನ ಬಳಿಗೆ ಹೋಗಿ, ಹೆಗಲಮೇಲೆ ಕೈಯಿಟ್ಟು ಅಕ್ಕರೆಯಿಂದ ಅವನಿಗೆ ಒಂದೆರಡು ಮಾತುಗಳನ್ನು ಹೇಳಿದರು. ಆ ವ್ಯಕ್ತಿಯು ಮೊದಲು ಅನುಮಾನದಿಂದಿದ್ದು ನಂತರ ಮಾತನಾಡಿದನು. ಈ ರೀತಿ ಮೃದುವಾಗಿ ಮಾತನಾಡುತ್ತ ಅವರಿಬ್ಬರು ತುಸುದೂರ ನಡೆದರು. ಆಮೇಲೆ ಅವನು ಏನನ್ನೊ ಗಾಂಧೀಜಿಯವರ ಕೈಯಲ್ಲಿಟ್ಟು ಹೊರಟುಹೋದನು.

ಅವನು ಗಾಂಧೀಜಿಯವರನ್ನು ಕೊಲ್ಲಬೇಕೆಂದು ಮಾಡಿದ್ದನು. ಆದರೂ ಆತನು ಸುಮ್ಮನೆ ಚೂರಿಯನ್ನು ಅವರಿಗೆ ಒಪ್ಪಿಸಿದ್ದನು. ' ಅವನನ್ನು ನಾನು ಸೆರೆಹಿಡಿಸಿದ್ದರೆ, ಅವನು ನನ್ನ ಹಗೆಯಾಗುತ್ತಿದ್ದನು. ಆದರೆ ಈಗ ಅವನು ನನ್ನ ಮಿತ್ರನಾಗಿರುವನು " ಎಂದರು ಗಾಂಧೀಜಿ.

ಜನರಲ್ ಸ್ಮಟ್ಸ್‌ನು ತಾನು ಕೊಟ್ಟ ವಚನವನ್ನು ಪಾಲಿಸಲಿಲ್ಲ, ಕಪ್ಪುಶಾಸನವನ್ನು ಹಿಂತೆಗೆದುಕೊಳ್ಳಲು ನಿರಾಕರಿಸಿದನು. ಮತ್ತೊಮ್ಮೆ ಭಾರತೀಯರು ಅದೇ ಮಸೀದಿಯಲ್ಲಿ ಸೇರಿ ತಮ್ಮ ಪ್ರಮಾಣಪತ್ರಗಳನ್ನು ದೊಡ್ಡ ಪಾತ್ರೆಯೊಂದರಲ್ಲಿ ಸುಟ್ಟರು. ಹೊಗೆಯು ಮೇಲೇರಿದಂತೆ ಉಳಿದವರು ಕೂಡ ತಮ್ಮ ಪ್ರಮಾಣಪತ್ರಗಳನ್ನು ಬೆಂಕಿಯಲ್ಲಿ ಹಾಕಲಿಕ್ಕೆ ಮುಂದಾದರು. ಈರೀತಿ ಎರಡು ಸಾವಿರದಷ್ಟು ಪತ್ರಗಳು ನಾಶವಾಯಿತು. ಗಾಂಧೀಜಿಯವರನ್ನು ಮೊದಲುಮಾಡಿ ಭಾರತೀಯ ಹಿರಿಯರನ್ನು ಬಂಧಿಸಿದರು. ಪ್ರಮಾಣಪತ್ರಗಳಿಲ್ಲದ ಭಾರತೀಯರಿಗೆ ಟ್ರಾನ್ಸ್‌ವಾಲದಲ್ಲಿ ವಾಸಿಸಲು ಇನ್ನು ಅಧಿಕಾರವಿರಲಿಲ್ಲ. ಯಾವ ಕ್ಷಣಕ್ಕೂ ಅವರನ್ನು ಹೊರಗೆಹೋಗಿರೆಂದು ಹೇಳಬಹುದಿತ್ತು. ವಲಸೆಯ ಮತ್ತು ಪ್ರತ್ಯೇಕತೆಯ ಶಾಸನವನ್ನು ಮುರಿದವರನ್ನು ಸೆರೆಯಲ್ಲಿ ಇಡಲಾಯಿತು.

ಇಷ್ಟರಲ್ಲಿ ಗಾಂಧೀಜಿಯವರು ಅನೇಕಸಲ ಕಾರಾವಾಸವನ್ನು ಕಂಡಿದ್ದರು. ಎಷ್ಟೋ ಬಾರಿ ಅವರು ಅಲ್ಲಿ ಕಠಿಣಶ್ರಮವನ್ನು ವಹಿಸಬೇಕಾಗುತ್ತಿತ್ತು.

ಅವರು ಕಾರಾಗೃಹದಲ್ಲಿ ಹಾಕಿಕೊಳ್ಳುತ್ತಿದ್ದ ಟೊಪ್ಪಿಗೆಯು ಅವರಿಗೆ ತಮ್ಮ ದೇಶಬಾಂಧವರು ಹೆಚ್ಚು ಗೌರವಪೂರ್ಣವಾದ ಜೀವನವನ್ನು ಸಾಗಿಸಬೇಕೆಂಬ ಆಕಾಂಕ್ಷೆಯ ಸಂಕೇತವಾಯಿತು. ಮುಂದೆ ಭಾರತದ ಸ್ವಾತಂತ್ರ್ಯ ಸಮರದಲ್ಲಿ ಪ್ರಮುಖವಾಗಿ ಗೋಚರಿಸಿದ "ಗಾಂಧೀ ಟೊಪ್ಪಿಗೆ"ಯ ಪ್ರತಿಕೃತಿಯದಾಗಿತ್ತು.

1909 ರ ಜೂನ್ ತಿಂಗಳಲ್ಲಿ ಗಾಂಧೀಜಿಯವರು ಒಂದು ಪ್ರತಿನಿಧಿ ಮಂಡಲಿಯೊಡನೆ ಇಂಗ್ಲೆಂಡ್‌ಗೆ ತೆರಳಿದರು ಮತ್ತು ಭಾರತೀಯರಿಗಾಗಿ ಯಾವ ಪರಿಹಾರವನ್ನು ತರದೆ ಹಿಂದಿರುಗಿದರು.



ಹಡಗಿನಲ್ಲಿ ಅವರು ಗುಜರಾತಿಯಲ್ಲಿ ತಮ್ಮ ವಿಖ್ಯಾತವಾದ ಪುಸ್ತಕ "ಹಿಂದ್ ಸ್ವರಾಜ್ಯ" ವನ್ನು ಬರೆದರು. ಈ ಗ್ರಂಥದಲ್ಲಿ ಅವರು ತಮ್ಮ ರಾಜಕೀಯ ಮತ್ತು ಧಾರ್ಮಿಕ ವಿಚಾರ ಗಳನ್ನು ವಿವರಿಸಿರುವರು.

ಗಾಂಧೀಜಿಯವರು ದ್ವೇಷದ ಬದಲಾಗಿ ಪ್ರೇಮವನ್ನೂ ಹಿಂಸೆಯ ಬದಲಾಗಿ ತ್ಯಾಗವನ್ನೂ ಪಾಶವೀಶಕ್ತಿಯ ಬದಲಾಗಿ ಆತ್ಮದ ಬಲವನ್ನೂ ಬೋಧಿಸಿದರು.

ಇವುಗಳ ಪರೀಕ್ಷೆಯು ದಕ್ಷಿಣ ಆಫ್ರಿಕೆಯಲ್ಲಿ ಜರುಗಬೇಕಾಗಿತ್ತು.

1913 ರ ಮಾರ್ಚ್ ತಿಂಗಳಲ್ಲಿ ದಕ್ಷಿಣ ಆಫ್ರಿಕೆಯ ವರಿಷ್ಠನ್ಯಾಯಾಲಯವು ಎಲ್ಲ ಹಿಂದು, ಮುಸ್ಲಿಮ ಮತ್ತು ಪಾರ್ಸಿ ವಿವಾಹಗಳನ್ನು ರದ್ದುಗೊಳಿಸಿತು ಮತ್ತು ಸರಕಾರವು ನ್ಯಾಯಾ ಲಯಕ್ಕೆ ಬೆಂಬಲವಾಗಿ ನಿಂತಿತು. ಗಾಂಧೀಜಿಯವರು ಸತ್ಯಾಗ್ರಹವನ್ನು ಮಾಡಲು ನಿರ್ಧರಿಸಿ ದರು. ಆ ಶಬ್ದವು ಎರಡು ಪದಗಳಿಂದ ಕೂಡಿದೆ. ಸತ್ಯ ಮತ್ತು ಆಗ್ರಹ, ಎಂದರೆ ಹಟ. ಟ್ರಾನ್ಸ್‌ವಾಲನ್ನು ಶಾಂತಿಯುತವಾಗಿ ಪ್ರವೇಶಿಸಿ ಶಾಸನಭಂಗಮಾಡುವುದು ಗಾಂಧೀಜಿಯವರ ಯೋಜನೆಯಾಗಿತ್ತು. ಪ್ರಮಾಣಪತ್ರಗಳಿಲ್ಲದೆ ಅತ್ತ ಹೋಗಲು ಅವರೆಲ್ಲರಿಗೆ ಅಧಿಕಾರವಿರಲಿಲ್ಲ; ಅಂತೆಯೆ ಅವರೆಲ್ಲರನ್ನು ಬಂಧಿಸುವದು ನಿಶ್ಚಿತ. ಅವರಿಗೆ ಬೇಕಾದುದೂ ಅದೇ ಆಗಿತ್ತು.

ಅಕ್ಟೋಬರ್ 28 ನೆಯ ದಿನಾಂಕ ಆ ಮಹಾಯಾತ್ರೆಯು ಆರಂಭವಾಯಿತು. ಗಾಂಧೀಜಿ ಯವರ ನೇತೃತ್ವದಲ್ಲಿ ತಾವು ಹಾಕಿಕೊಂಡ ಬಟ್ಟೆಗಳು ಒಂದು ಕಂಬಳಿಯ ಹೊರತಾಗಿ ಬೇರೆ ಯಾವ ವಸ್ತ್ರವೂ ಇರದ 2500 ಜನ ಗಂಡಸರು, ಹೆಂಗಸರು ಮತ್ತು ಮಕ್ಕಳು ನಡೆದರು. ನ್ಯೂಕ್ಯಾಸಲ್‌ನಿಂದ ಹೊರಟ ಈ ಶಾಂತಿಸೇನೆಯು ಆತ್ಮಗೌರವಕ್ಕಾಗಿ ಮತ್ತು ಬಂದ ಎಲ್ಲ ಕಷ್ಟಗಳನ್ನು ಸಹಿಸಲಿಕ್ಕೆಂದು ಟ್ರಾನ್ಸ್‌ವಾಲದವರೆಗೆ 36 ಮೈಲು ನಡೆಯಿತು.

ಅದೊಂದು ಅಪೂರ್ವವಾದ ಅದ್ಭುತವಾದ ನೋಟ. ಸತ್ಯಾಗ್ರಹಿ ಗಳಿಗಾಗಿ ಅನುಕಂಪ ಮತ್ತು ಸಹಾಯ ಗಳು ಪ್ರಪಂಚದ ಎಲ್ಲ ಭಾಗಗಳಿಂದ ಬಂದವು. ಅವರ ಸುವ್ಯವಸ್ಥಿತ ಮತ್ತು ಶಿಸ್ತಿನ ನಡೆದಾಟವು ಕೋಟ್ಯಾಂತರ ಜನರ ಹೃದಯಗಳನ್ನು ಕದಡಿತು.



ನಾಲ್ಕುದಿನ ನಡೆದು ಅವರು ಟ್ರಾನ್ಸ್‌ವಾಲನ್ನು ತಲುಪಿದರು. ನಾಲ್ಕನೆಯ ದಿನ ಅವರನ್ನು ಬಂಧಿಸಿ ರೈಲಿನಲ್ಲಿ ಸಾಗಿಸಿದರು. ಗಾಂಧೀಜಿಯವರನ್ನು ಮುಂಚಿತವಾಗಿಯೆ ಸೆರೆಹಿಡಿದು ಮೂರು ತಿಂಗಳ ಕಾರಾವಾಸದ ಶಿಕ್ಷೆಯನ್ನು ಅವರಿಗೆ ವಿಧಿಸಿದ್ದರು.

ಅತ್ತ ಹಿಂದುಸ್ತಾನದಿಂದ ಬೇರೆ ಮುಂದಾಳುಗಳು ಬಂದು ಹೋರಾಟದಲ್ಲಿ ಭಾಗವಹಿಸಿದರು. ಗಾಂಧೀಜಿಯವರು ಅಷ್ಟರಲ್ಲಿ ಬಿಡುಗಡೆಯಾಗಿ ಬಂದುದರಿಂದ ಅವರನ್ನು ಸ್ವಾಗತಿಸಿದರು.



ಸರಕಾರವು ಈಗ ಒಂದು ಪರಿಹಾರ ಮಾರ್ಗವನ್ನು ಹುಡುಕುತ್ತಿತ್ತು. ಅಂತೆಯೆ ಅನೇಕ ಭಾರತ ವಿರೋಧಕ ಸದಸ್ಯರುಳ್ಳ ಒಂದು ಸಮಿತಿಯನ್ನು ನೇಮಿಸಿತು. ಆದರೆ ಭಾರತೀಯರು ಅದನ್ನು ಬಹಿಷ್ಕರಿಸಿದರು. ಹಾಗಾಗಿ ಭಾರತೀಯರಿಗೆ ಗೆಲುವು ದೊರಕಿತು. ಅವರ ಬೇಡಿಕೆಗಳನ್ನೆಲ್ಲ ಮನ್ನಿಸಬೇಕೆಂದು ಕೂಡಲೇ ಶಿಫಾರಸುಮಾಡಲಾಯಿತು.

ಮುಖ್ಯವಾದ ಕದನವನ್ನು ಗೆದ್ದ ಕಾರಣ ಗಾಂಧೀಜಿಯವರು ಸ್ವದೇಶಕ್ಕೆ ತೆರಳಲು ಸಿದ್ಧರಾದರು.



ಭಾರತದಲ್ಲಿ ಮಹಾ ಬದಲಾವಣೆಗಳು ಆಗುತ್ತಿದ್ದುವು. ಎಲ್ಲ ಜನರು ಒಟ್ಟಾಗಬೇಕು ಎಂಬ ಭಾವನೆಯು ಬೆಳೆದಿತ್ತು.

ಅದು ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನ ಜನ್ಮದಿಂದ ಆರಂಭವಾಗಿತ್ತು. 1885 ರಲ್ಲಿ ಭಾರತದ ಮುಂದಾಳುಗಳನ್ನು ಮತ್ತು ಹಿಂದುಸ್ತಾನದ ಪ್ರಗತಿಯನ್ನು ಸಾಧಿಸಲು ಹೆಣಗುತ್ತಿದ್ದ ಇತರರನ್ನು ಒಂದೆಡೆ ಸೇರಿಸುವ ಯೋಚನೆಯನ್ನು ಆಲನ್ ಓಕ್ಟೋವಿಯನ್ ಹ್ಯೂಮ್ ಎಂಬ ಇಂಗ್ಲಿಷ್ ಗೃಹಸ್ಥನು ಮಾಡಿದನು. ಇಂಥಹ ಸಂಘಟನೆಯಲ್ಲಿ ಅವರು ಒಬ್ಬರನ್ನೊಬ್ಬರು



ಭೆಟ್ಟಿಯಾಗಿ ವಿಚಾರವಿನಿಮಯಮಾಡಬಹುದಿತ್ತು. ಸಣ್ಣ ಪ್ರಮಾಣದಲ್ಲಿ ವಿವಿಧ ಚಟುವಟಿಕೆಗಳನ್ನು ಕೈಕೊಳ್ಳಲು ಬದಲಾಗಿ ಒಟ್ಟಿನಲ್ಲಿ ಕಾರ್ಯಪ್ರವೃತ್ತರಾಗಬಹುದಾಗಿತ್ತು.

1885 ರ ಡಿಸೆಂಬರ್ 18 ನೆಯ ದಿನಾಂಕ ಮುಂಬಯಿಯ ಗೋಕುಲ ದಾಸ ತೇಜಪಾಲ ಸಂಸ್ಕೃತ ಪಾಠಶಾಲೆಯ ಸಭಾಮಂದಿರದಲ್ಲಿ ಭಾರತ ರಾಷ್ಟ್ರೀಯ ಮಹಾಸಭೆಯ ಮೊದಲ ಅಧಿವೇಶನವು ಜರುಗಿತು. ಭಾರತದ ಎಲ್ಲ ಭಾಗಗಳಿಂದ ಆಮಂತ್ರಿತರಾದ ಮತ್ತು ಎಲ್ಲ ಧರ್ಮಗಳ ಪ್ರತಿನಿಧಿಗಳೂ ಸೇರಿ 72 ಜನರಲ್ಲದೆ ಕೆಲಜನ ಇಂಗ್ಲಿಷರು ಕೂಡ ಆ ಸಭೆಯಲ್ಲಿ ಭಾಗವಹಿಸಿದರು. ಬಂಗಾಲದ ವೋಮೇಶ ಚಂದ್ರ ಬಾನರ್ಜಿಯವರು ಅಧ್ಯಕ್ಷರಾಗಿದ್ದರು. ಆ ಅಧಿವೇಶನವು ಹ್ಯೂಮರಿಗೆ ಅಭಿನಂದನೆಗಳನ್ನು ಮತ್ತು ಭಾರತದ ಸಾಮ್ರಾಜ್ಞಿಗೆ ಅಭಿವಂದನೆಗಳನ್ನು ಸಲ್ಲಿಸಿ ಮೂರುದಿನಗಳ ತರುವಾಯ ಕೊನೆಗೊಂಡಿತು.

ಈ ಸಭೆಯು ಜನತೆಯಲ್ಲಿ ಅಪಾರವಾದ ಆಸಕ್ತಿಯನ್ನು ಮೂಡಿಸಿತು. ಮೊದಮೊದಲು ಕಾಂಗ್ರೆಸ್ಸು ಕೇವಲ ಚರ್ಚಾಕೂಟವಾಗಿದ್ದು ಬ್ರಿಟಿಷ್ ಸರಕಾರದ ಮುಖಾಂತರ ಭಾರತದ ವಿಕಾಸವನ್ನು ಸಾಧಿಸುವ ಉದ್ದೇಶವನ್ನು ಮಾತ್ರ ಇಟ್ಟುಕೊಂಡಿತ್ತು.

ಮೊದಮೊದಲಿನ ಅಧಿವೇಶನಗಳಲ್ಲಿ ಬ್ರಿಟಿಷ ಅರಸರ ಭಾವಪಟಗಳು ಮತ್ತು ಯೂನಿಯನ್ ಜಾಕ್ ಎಂದೆನಿಸಿದ ಬ್ರಿಟಿಷರ ಧ್ವಜವು ಪ್ರಮುಖವಾಗಿ ಪ್ರದರ್ಶಿತವಾಗಿದ್ದವು.

ಆಮೇಲೆ ಗಾಂಧೀಜಿಯವರ ಸ್ಫೂರ್ತಿದಾಯಕ ನೇತೃತ್ವದಲ್ಲಿ ಕಾಂಗ್ರೆಸ್ಸು ಭಾರತೀಯಸ್ವಾತಂತ್ರ್ಯದ ಅಗ್ರಣಿಯಾಯಿತು. ಎಲ್ಲ ಸಮುದಾಯಗಳಿಂದ ಸ್ತ್ರೀಪುರುಷರನ್ನು ಅದು ಆಕರ್ಷಿಸಿತು, ದೂರದ ಹಳ್ಳಿಗಳಿಗೆ ಕೂಡ ಅದರ ಸಂದೇಶವು ತಲುಪಿತು. ಅದು ಭಾರತದ ಚರಿತ್ರೆಯ ದಾರಿಯನ್ನೆ ಬದಲಿಸಿತು.



ಗಾಂಧೀಜಿಯವರು 1914ರ ಜುಲೈ 18ನೆಯ ದಿನಾಂಕ ದಕ್ಷಿಣ ಆಫ್ರಿಕೆಯಿಂದ ಹೊರಟಾಗ ಸಾವಿರಾರು ಜನ ದುಃಖಭರಿತ ಭಾರತೀಯರು ಅವರನ್ನು ಆತ್ಮೀಯಭಾವದಿಂದ ಬೀಳ್ಕೊಟ್ಟಿದ್ದರು. ಆ ದೇಶದಲ್ಲಿ ಮೊದಲು ಎಂದೂ ನೋಡಸಿಗದ ಸನ್ನಿವೇಶವಾಗಿತ್ತು ಅದು.

ಅವರು ನೇರವಾಗಿ ಭಾರತಕ್ಕೆ ಬರದೆ ತುಸು ದಿನ ಇಂಗ್ಲೆಂಡ್‌ನಲ್ಲಿ ಇದ್ದು ತಿರುಗಿ ಸ್ವದೇಶಕ್ಕೆ ಬಂದರು.

ಮುಂಬಯಿಯಲ್ಲಿ ಅವರ ಸ್ವಾಗತಕ್ಕಾಗಿ ಅನೇಕ ಸತ್ಕಾರಸಭೆಗಳು ಜರುಗಿದವು. ಅವುಗಳಲ್ಲೊಂದರಲ್ಲಿ ಜಿನ್ನಾ ಸ್ವಾಗತಭಾಷಣಮಾಡಿ ಗಾಂಧೀಜಿಯವರಿಗೆ ಗೌರವವನ್ನು ಸಲ್ಲಿಸಿದರು.

ಗಾಂಧೀಜಿಯವರು ತಿಂಗಳುಗಟ್ಟಲೆ ಭಾರತದಲ್ಲೆಲ್ಲ ಪ್ರವಾಸಮಾಡಿ ಯಾತ್ರಾಸ್ಥಳಗಳಲ್ಲಿ ಪುರೋಹಿತರು, ವರ್ತಕರು, ಭಿಕ್ಷುಕರು, ಮೊದಲಾದ ಎಲ್ಲಬಗೆಯ ಜನರನ್ನು ಭೆಟ್ಟಿಯಾದರು. ಅವರು ಯಾವಾಗಲೂ ಮೂರನೆಯ ದರ್ಜೆಯಲ್ಲಿ ಪ್ರವಾಸಮಾಡುತ್ತಾ ಬಡವರ ಕಷ್ಟಗಳಲ್ಲಿ ಪಾಲುಗಾರರಾದರು ಮತ್ತು ಜನತೆಯನ್ನು ಹಾಗೂ ಅವರ ತೊಂದರೆಗಳನ್ನು ತಿಳಿದುಕೊಂಡರು.

ಅನಂತರ ಅವರು ತಮ್ಮ ಕೆಲವು ಅನುಯಾಯಿಗಳೊಂದಿಗೆ ಆಶ್ರಮವೊಂದರಲ್ಲಿ ನೆಲಸುವ ನಿರ್ಧಾರವನ್ನು ಕೈಕೊಂಡರು. ಅಹಮ್ಮದಾಬಾದಿನ ಬಳಿಯಲ್ಲಿ ಕೋಚರಬ ಎಂಬ





ಸಣ್ಣ ಹಳ್ಳಿಯಲ್ಲಿ ಅದನ್ನು ಸ್ಥಾಪಿಸಿದರು. 1915 ರ ಮೇ ತಿಂಗಳ 25 ನೆಯ ದಿನಾಂಕ ಅದು ಆರಂಭವಾಯಿತು. ಒಂದು ವರ್ಷದನಂತರ ಅಹಮ್ಮದಾಬಾದಿನ ಬಳಿಯಲ್ಲಿಯೆ ಸಾಬರಮತಿಯ ದಂಡೆಗೆ ಅದು ಸ್ಥಳಾಂತರಿಸಲಾಯಿತು.

ಆ ಆಶ್ರಮವನ್ನು ಸೇರುವವರೆಲ್ಲರೂ ಸತ್ಯನಿಷ್ಠೆ, ಅಹಿಂಸೆ, ನಿರ್ಭಯ, ಸಂಯಮಗಳನ್ನು ಸದಾ ಆಚರಿಸುವ ಪ್ರತಿಜ್ಞೆಯನ್ನು ಮಾಡಬೇಕಾಗುತ್ತಿತ್ತು. ಸರಳವಾದ ಜೀವನವನ್ನು ನಡೆಸುತ್ತ ಅವರು ಸುತ್ತುಮುತ್ತಲಿನ ಪ್ರದೇಶದಲ್ಲಿ ಸೇವೆಯನ್ನು ಸಲ್ಲಿಸುತ್ತ ನೆರೆಹೊರೆಯವರು ನೀಡಿದುದನ್ನು ಮಾತ್ರ ಸ್ವೀಕರಿಸಬೇಕಾಗಿತ್ತು.

ಆಶ್ರಮದಲ್ಲಿ 25 ಜನ ಸ್ತ್ರೀಪುರುಷರಿದ್ದರು. ಅವರೆಲ್ಲರೂ ಒಂದು ಕುಟುಂಬದವರಂತೆ ಎಣಿಸುತ್ತಿದ್ದರು.

ಈ ಆಶ್ರಮದಲ್ಲಿ ಮೊದಲುಬಾರಿಗೆ ಗಾಂಧೀಜಿಯವರಿಗೆ ನೂಲುವ – ರಾಟೆ ಅಥವಾ ಚರಕಾದ ಪರಿಚಯವಾಯಿತು. " 1915 ರಲ್ಲಿ ಕೂಡ ನಾನು ದಕ್ಷಿಣ ಆಫ್ರಿಕೆಯಿಂದ ಭಾರತಕ್ಕೆ ಬಂದಾಗ ಪ್ರತ್ಯಕ್ಷವಾಗಿ ಚರಕಾವನ್ನು ನೋಡಿರಲಿಲ್ಲ " ಎಂದು ಗಾಂಧೀಜಿ ಒಂದೆಡೆ ಬರೆದಿದ್ದಾರೆ. ಆಗ್ಗೆ ಪರಿಚಿತಳಾದ ಒಬ್ಬ ಗುಜರಾತೀ ವಿಧವೆಯ ಸಹಾಯದಿಂದ ಅವರು ಚರಕಾವೊಂದನ್ನು ಪಡೆದರು. ತುಂಬಾ ಆಸಕ್ತಿಯಿಂದ ಅವರು ಖಾದಿಯನ್ನು ಸಿದ್ಧಗೊಳಿಸಲು ಕಲಿತರು. ಆಮೇಲೆ ಅವರೂ ಅವರ ಅನುಚರರೂ ಯಾವಾಗಲೂ ತಾವೇ ನೂತ ನೇಯ್ದ ಬಟ್ಟೆಗಳನ್ನು ಧರಿಸುತ್ತಿದ್ದರು.

ಕೆಲವು ತಿಂಗಳ ತರುವಾಯ ಗಾಂಧೀಜಿ ತಮ್ಮ ಆಶ್ರಮದಲ್ಲಿ ದೂದಾಭಾಯಿ, ದಾನಿಬೆನ್ ಮತ್ತು ಅವರ ಪುಟ್ಟ ಮಗಳು ಲಕ್ಷ್ಮಿ ಹೀಗೆ ಮುವ್ವರನ್ನೊಳಗೊಂಡ ಒಂದು 'ಅಸ್ಪೃಶ್ಯ' ಅಥವಾ ಕೆಳಜಾತಿಯ ಕುಟುಂಬವನ್ನು ಸೇರಿಸಿಕೊಂಡರು.

ಇದು ಆ ಹಳ್ಳಿಯ ಸಾಂಪ್ರದಾಯಿಕ ಹಿಂದುಗಳನ್ನು ಕದಡಿತು ಮತ್ತು ಅವರೆಲ್ಲರೂ ಅದರಿಂದ ಸಿಟ್ಟಾದರು. ಆಶ್ರಮಕ್ಕೆ ಅವರು ಕೊಡುತ್ತಿದ್ದ ಆಹಾರ ಮತ್ತು ಹಣವನ್ನು ನಿಲ್ಲಿಸಿದರು. ಆದರೆ ಗಾಂಧೀಜಿಯವರು ಆ ಅಸ್ಪೃಶ್ಯರನ್ನು ಆಶ್ರಮದಿಂದ ಕಳಿಸಲು ನಿರಾಕರಿಸಿದರು. ಅನ್ಯಾಯವನ್ನು ಮಾಡುವುದಕ್ಕಿಂತ ಆಶ್ರಮವನ್ನು ಮುಚ್ಚಲು ಅವರು ಸಿದ್ಧರಾಗಿದ್ದರು.

ಕೊನೆಗೆ ಹಣವೆಲ್ಲ ತೀರಿ ಗಾಂಧೀಜಿ ಆಶ್ರಮದಿಂದ ಹೊರಡಬೇಕೆನ್ನುವಾಗ್ಗೆ ಒಬ್ಬ ಅಪರಿಚಿತ ಶ್ರೀಮಂತ ಸಭ್ಯಗೃಹಸ್ಥನು ಆಶ್ರಮಕ್ಕೆ ಬಂದು ಗಾಂಧೀಜಿಯವರಿಗೆ 13000 ರೂಪಾಯಿಗಳ ನಗದನ್ನು ನೀಡಿದನು. ಆಶ್ರಮವು ಉಳಿಯಿತು.



ಗಾಂಧೀಜಿಯವರು ಜನ ಸಾಮಾನ್ಯರ ಸಂಪರ್ಕ ಇಟ್ಟುಕೊಂಡರು. ಕಾರ್ಖಾನೆಗಳು ಮತ್ತು ತೋಟಗಳಲ್ಲಿ ಕೆಲಸಮಾಡುವವರಲ್ಲದೆ ಅನ್ಯಾಯವನ್ನು ಎದುರಿಸಬೇಕಾದವರು ಎಷ್ಟೋ ಬಾರಿ ಅವರ ಸಹಾಯವನ್ನು ಕೋರುತ್ತಿದ್ದರು. ಸತ್ಯದ ಬಗ್ಗೆ ನಿಷ್ಠೆಯಿರುವ ಆವಶ್ಯಕತೆ ಮತ್ತು ಸತ್ಯಪೂರ್ಣವಾಗಿ ಹೋರಾಡುವವರ ಸಾಮರ್ಥ್ಯ ಇವುಗಳನ್ನು ಅವರು ಒತ್ತಿ ಹೇಳುತ್ತಿದ್ದರು.

ಬಿಹಾರದ ಚಂಪಾರಣ್ಯದಿಂದ ಕರೆಯು ಬಂದ ಕೂಡಲೆ ಅವರು ಅತ್ತ ಹೊರಟರು. ಆ ಜಿಲ್ಲೆಯಿಂದ ಹೊರಟುಹೋಗಬೇಕೆಂಬ ಆಜ್ಞೆಯನ್ನು ಅವರು ಪಾಲಿಸಲು ನಿರಾಕರಿಸಿದರು. ಆದರಿಂದ ಅವರು ನ್ಯಾಯಾಲಯದಲ್ಲಿ ವಿಚಾರಣೆಯನ್ನು ಎದುರಿಸಬೇಕಾಯಿತು.

ನ್ಯಾಯಮಂದಿರವು ಜನರಿಂದ ಕಿಕ್ಕಿರಿದು ತುಂಬಿತ್ತು; ಆದರೆ ಸರಕಾರವು ವಿಚಾರಣೆಯನ್ನು ಮುಂದುವರೆಸಲು ಇಷ್ಟಪಡಲಿಲ್ಲ. ಗಾಂಧೀಜಿಯವರು ತಮ್ಮ ಅಪರಾಧವನ್ನು ಒಪ್ಪಿ ಕೊಂಡರೂ ವಿಚಾರಣೆಯು ಮುಂದೆ ಬಿದ್ದಿತು. ಅನಂತರ ಅದನ್ನು ಹಿಂದೆಗೆದುಕೊಂಡರು ಮತ್ತು ಮುಂದೆ ನಡೆದ ಅಧಿಕೃತ ತನಿಖೆಯಿಂದ ಕೆಲಸಗಾರರಿಗೆ ಅನುಕೂಲವಾಯಿತು. ಹೀಗೆ ಗಾಂಧೀಜಿಯವರಿಗೆ ಮತ್ತೊಂದು ಗೆಲುವು ದೊರೆಯಿತು.





ಈ ರೀತಿಯಾಗಿ ಅವರು ಎಲ್ಲ ಸ್ಥಳಗಳಿಗೆ ಹೋಗುತ್ತ ಸಾಧ್ಯವಾದ ಸಹಾಯವನ್ನು ಸಲ್ಲಿಸುತ್ತಿದ್ದರು. ಯಾವ ಶ್ರಮಕ್ಕೂ ಹಿಂಜರಿಯದೆ ಅನೇಕ ಅನನುಕೂಲತೆಗಳನ್ನು ಸಹಿಸಿದರು.

ಒಮ್ಮೆ ಅವರಿಗೆ ಆಮಶಂಕೆಯಾಯಿತು. ಅವರು ಗುಜರಾತದ ನಡಿಯಾದವನ್ನು ತಲುಪಿದಾಗ್ಗೆ ಅವರಿಗೆ ತುಂಬ ಜ್ವರ ನೋವು ಇದ್ದಿತು. ಅವರು ಅಸ್ವಸ್ಥ್ಯದ ಕಾರಣವಾಗಿ ಹಾಸುಗೆಯಲ್ಲಿ ಹೊರಳಾಡುತ್ತಿದ್ದರು.

ಓದಲು ಅವರು ಸಮರ್ಥರಾಗಲಿಲ್ಲ; ಮಾತಾಡುವದು ಕೂಡ ದುಸ್ತರವಾಯಿತು. ಅವರು ಏನನ್ನು ತಿನ್ನಲಿಲ್ಲ ಔಷಧವನ್ನೂ ತೆಗೆದುಕೊಳ್ಳಲಿಲ್ಲ. ಹಸುವಿನ ಹಾಲನ್ನು ಕೂಡ ಬಿಟ್ಟುಕೊಟ್ಟರು. ಎಷ್ಟೊ ವರ್ಷಮೊದಲೇ ಸಮಾಜವು ಹಸುಗಳನ್ನು ಕೀಳಾಗಿ ನೋಡಿಕೊಳ್ಳುವರೆಂಬ ಕಾರಣವಾಗಿ ಅವರು ಅವುಗಳ ಹಾಲನ್ನು ಕುಡಿಯುವಂತಿಲ್ಲ ಎಂಬ ಶಪಥವನ್ನು ಮಾಡಿದ್ದರು. ಅವರ ಸುತ್ತಲಿನ ಜನರೆಲ್ಲರೂ ಚಿಂತಾಕ್ರಾಂತರಾದರು.

ಆಗ್ಗೆ ಕಸ್ತೂರಬಾ ಅವರಿಗೆ ಒಂದು ಯೋಚನೆಯು ಹೊಳೆಯಿತು. ಗಾಂಧೀಜಿಯವರ ಪಣವು ಹಸುವಿನ ಹಾಲಿನ ವಿಚಾರವಾಗಿತ್ತು. ಅಂತೆಯೆ ಅವರು ಆಡಿನ ಹಾಲನ್ನು ಕುಡಿಯಬಹುದಲ್ಲ. ತುಸು ಯೋಚನೆಯ ನಂತರ ಗಾಂಧೀಜಿಯವರು ಆಡಿನ ಹಾಲನ್ನು ಸ್ವೀಕರಿಸಿದರು. ಇದರಿಂದ ಅವರಿಗೆ ಶಕ್ತಿಯು ಬರುವಂತಾಗಿ ಮತ್ತೆ ಅವರು ಆರೋಗ್ಯವನ್ನು ಪಡೆದರು. ಅಂದಿನಿಂದ ಆಡಿನ ಹಾಲು ಅವರ ಆಹಾರದ ಒಂದು ಭಾಗವಾಯಿತು.

ಅವರು ಬೇನೆಯಿಂದ ಗುಣಹೊಂದುತ್ತಿದ್ದಾಗ್ಗೆ ರೌಲೆಟ್ ಕಾಯಿದೆಯು ಸ್ವೀಕೃತವಾಯಿತು. ವ್ಯಕ್ತಿಸ್ವಾತಂತ್ರ್ಯವನ್ನು ಮಿತಗೊಳಿಸುವ ಮತ್ತು ವಿಚಾರಣೆಯಿಲ್ಲದೆ ಜನರನ್ನು ಸೆರೆಯಲ್ಲಿಡುವ ಕಠೋರವಾದ ಕ್ರಮಗಳನ್ನು ಅದು ವಿಧಿಸಿತು. ಅಶಕ್ತರಾಗಿದ್ದರೂ ಕೂಡ ಆ ಕಾಯಿದೆಯನ್ನು ಪ್ರತಿಭಟಿಸುವ ಚರ್ಚೆಗಾಗಿ ಅವರು ಮದ್ರಾಸಕ್ಕೆ ತೆರಳಿದರು.

ರಾಜಗೋಪಾಲಾಚಾರಿಯವರ ಮನೆಯಲ್ಲಿ ಈ ವಿಷಯವಾಗಿ ಯೋಚಿಸುತ್ತ ಒಂದು ರಾತ್ರಿ ಅವರು ನಿದ್ದೆಹೋದರು. ಕನಸಿನಲ್ಲಿ ಒಂದು ಸಂಪೂರ್ಣ ಹರತಾಳದ ಯೋಜನೆಯನ್ನು ಅವರು ನೋಡಿದರು. ಸತ್ಯಾಗ್ರಹಕ್ಕೆ ಆತ್ಮಶುದ್ಧಿಯು ಅಗತ್ಯವಾಗಿತ್ತು. ಎಲ್ಲ ಜನರು ತಮ್ಮ ವ್ಯವಹಾರವನ್ನು ನಿಲ್ಲಿಸಿ ಆ ದಿನ ಉಪವಾಸ ಮತ್ತು ಪ್ರಾರ್ಥನೆಗಳನ್ನು ನಡೆಸಲಿ ಎಂದು ಅವರು ಹೇಳಿದರು.

1919 ರ ಏಪ್ರಿಲ್‌ನಲ್ಲಿ ಜರುಗಿದ ಹರತಾಳಗಳು ಪೂರ್ಣವಾಗಿ ಯಶಸ್ವಿಯಾದವು. ಕೆಲವೆಡೆಗಳಲ್ಲಿ ಹಿಂಸಾಚಾರವು ನಡೆದು ಎಷ್ಟೋ ಜನರು ಹತರಾದರು. ಗಾಂಧೀಜಿಯವರು



ದೇಶದಲ್ಲಿ ಶಾಂತಿಯನ್ನು ಸ್ಥಾಪಿಸಲು ಮುಂದಾದರೆ ಹಾಗೆ ಮಾಡಲು ಸರಕಾರದವರು ಅವರನ್ನು ಬಿಡದೆ ಅವರ ಸಂಚಾರವನ್ನು ಸೀಮಿತಗೊಳಿಸಿದರು.

ಅವರನ್ನು ಹೋಗಗೊಡದ ಪಂಜಾಬದಲ್ಲಿ ಘೋರವಾದ ದೊಂಬಿಗಳಾದುವು. ಅಮೃತ ಸರದ "ಜಾಲಿಯಾನವಾಲಾಬಾಗ" ದಲ್ಲಿ ಒಂದು ಸಭೆ ಜರುಗುವದೆಂದು ಘೋಷಣೆಯಾಯಿತು.

ದಂಡನಾಯಕ ಡಾಯರ್ ಆ ಸಭೆಯನ್ನು ಪ್ರತಿಬಂಧಿಸಿದನು. ಜನತೆಯು ಸೇರಿದನಂತರ ಆತನು ಒಮ್ಮೆಲೆ ಒಂದೇ ಒಂದಾಗಿದ್ದ ಹೊರಗೆ ಹೋಗುವ ದಾರಿಯಲ್ಲಿ ಬಂದು ನಿಂತನು. ಬಂದೂಕುಗಳೊಡನೆ ಸೈನಿಕರು ಅವನ ಸಮೀಪದಲ್ಲಿ ನಿಂತರು. ಅವನು ಬಂದ 30 ಕ್ಷಣಗಳಲ್ಲಿ ಯಾವ ಮುಂಸೂಚನೆಯೂ ಇಲ್ಲದೆ ನಿಃಶಸ್ತ್ರರಾದ ಜನರ ಮೇಲೆ ಅವರು ಗುಂಡನ್ನು ಹಾರಿಸಿದರು. ಆ ಗುಂಡಿನ ಮಳೆಯು ಪೂರ್ಣವಾಗಿ 10 ನಿಮಿಷ ನಡೆಯಿತು.

ಪಾರಾಗಿ ಹೋಗಲಿಕ್ಕೆ ದಾರಿಯೆ ಇರಲಿಲ್ಲ. ಓಡಿಹೋಗುವ ಯತ್ನದಲ್ಲಿ ಅನೇಕಜನರು ಅಲ್ಲಿದ್ದ ಒಂದು ಬಾವಿಯಲ್ಲಿ ಬಿದ್ದರು, ನೀರಿನಲ್ಲಿ ಮುಳುಗಿ ಸತ್ತರು. 1200 ಕ್ಕಿಂತ ಹೆಚ್ಚು ಜನರು ಹತರಾದರು, 3600 ಜನರು ಗಾಯಗೊಂಡರು.

ಪಂಜಾಬದಲ್ಲಿ ಅನಂತರ ದಬ್ಬಾಳಿಕೆಯು ತಾಂಡವವಾಡಿತು. ಜನರನ್ನು ಬಾರಕೋಲಿನಿಂದ ಹೊಡೆದರು ಮತ್ತು ಅವಮಾನದ ಆಚರಣೆಗೆ ಗುರಿಮಾಡಿದರು. ಬ್ರಿಟಿಷ್ ಸರಕಾರದಲ್ಲಿ ಗಾಂಧೀಜಿಯವರಿಗೆ ವಿಶ್ವಾಸವಿಲ್ಲದಂತಾಯಿತು.





ಒಂದು ವರ್ಷದಲ್ಲಿ ಸ್ವರಾಜ್ಯವನ್ನು ಪಡೆಯಬಹುದು ಎಂದು ಗಾಂಧೀಜಿಯವರು ತಮ್ಮ ದೇಶಬಾಂಧವರಿಗೆ ಹೇಳಿದರು. ಆದರೆ ಅದಕ್ಕಾಗಿ ಅವರು ಆರಂಭಿಸುವ ಅಸಹಕಾರದ ಎಲ್ಲ ಕಾರ್ಯಕ್ರಮವನ್ನು ಹೃತ್ಪೂರ್ವಕವಾಗಿ ಜನರು ಎತ್ತಿಹಿಡಿಯಬೇಕು. ಕೂಡಲೆ ಹರತಾಳಗಳು, ಮೆರವಣಿಗೆಗಳು, ಮುಷ್ಕರಗಳು ಜರುಗಿದವು. ಆದರೆ ಅದರಲ್ಲಿ ಯಾವುದೂ ಹಿಂಸೆಯನ್ನು ತೋರಲಿಲ್ಲ. ಶಾಸನಬದ್ಧವಾದ ಉಪಾಯಗಳಿಂದ ಸ್ವರಾಜ್ಯವನ್ನು ಪಡೆಯುವ ಕಲ್ಪನೆಯು ಶಾಸನಬದ್ಧ ಮತ್ತು ಶಾಂತಿಯುತ ಉಪಾಯಗಳಿಂದ ಎಂಬುದರಲ್ಲಿ ಬೆಳೆದಾಗ್ಗೆ ಆ ಹೊಸ ಆಂದೋಲನಕ್ಕೆ ಆಧಾರವಾದ ಪ್ರೇರಣೆಯು ಸ್ಪಷ್ಟವಾಯಿತು. ವಕೀಲರು ತಮ್ಮ ವೃತ್ತಿಯನ್ನು ಬಿಟ್ಟುಕೊಟ್ಟರು ಮತ್ತು ಪಂಚಾಯತಿಗಳು ನ್ಯಾಯಮಂದಿರಗಳಾದುವು.







"ಕಾರಕೂನರನ್ನು ಮತ್ತು ಸರಕಾರದ ನೌಕರರನ್ನು ನಿರ್ಮಿಸುವ ಕಾರಖಾನೆಗಳು" ಎಂದ್ಕು ಗಾಂಧೀಜಿಯವರು ಹೇಳಿದ ಶಾಲಾ ಕಾಲೇಜುಗಳಿಂದ ವಿದ್ಯಾರ್ಥಿಗಳು ಸ್ವಾತಂತ್ರ್ಯಸಮರದಲ್ಲಿ ಪಾಲುಗೊಳ್ಳಲು ಹೊರಗೆ ಬಂದರು. ಗಾಂಧೀಟೊಪ್ಪಿಗೆ ಮತ್ತು ಕೈಮಗ್ಗದ ಖಾದೀ ಬಟ್ಟೆಯು ಸ್ವಾತಂತ್ರ್ಯಯೋಧರ ಕವಚವಾಯಿತು. ಚರಕವು ಭಾರತದ ವಿಮೋಚನೆಯ ಪ್ರತೀಕ ವಾಯಿತು. ವರ್ಷದಲ್ಲಿ ಕೆಲಕಾಲ ಕೆಲಸವಿಲ್ಲದ ರೈತರಿಗೆ ಅದು ಅಲ್ಪವಾದರೂ ಸಹಾಯಕ ಉತ್ಪನ್ನದ ಸಾಧನವಾಯಿತು. ಆಯಾತದ ಬಟ್ಟೆಯ ಮೇಲೆ ಅವಲಂಬಿಸುವದರಿಂದ ಭಾರತ ವನ್ನು ಚರಕ ಮುಕ್ತಗೊಳಿಸುವಂತಾಯಿತು.

ಜನ ಸಾಮಾನ್ಯರನ್ನು ಆಕರ್ಷಿಸುವದೇ ಗಾಂಧೀಜಿಯವರ ಜಾಣತನವಾಗಿತ್ತು. ಅವರು ತಿಳಿಯು ಬಲ್ಲ ಭಾಷೆಯಲ್ಲಿ ಸರಳವಾಗಿ ಮತ್ತು ಪರಿಚಿತವಾದ ದೃಷ್ಟಾಂತಗಳ ಮೂಲಕ ಸಾವಿರಾರು





ನಿರಕ್ಷರ ಜನರನ್ನು ಉದ್ದೇಶಿಸಿ ಭಾಷಣಮಾಡಿದರು. ಜನರು ಗಾಂಧೀಜಿಯವರಿಗೆ ನೀಡಿದ ಘನವಾದ ಬೆಂಬಲಕ್ಕೆ ಅದೇ ಕಾರಣವಾಗಿತ್ತು.

ಯಂತ್ರದಿಂದ ಸಿದ್ಧವಾದ ವಿದೇಶೀವಸ್ತ್ರವು ಹೇಗೆ ಭಾರತದ ಗ್ರಾಮ ಕೈಗಾರಿಕೆಯನ್ನು ಹಾಳುಮಾಡಿತು ಎಂಬುದನ್ನು ತೋರಿಸಲಿಕ್ಕೆ ಅವರು ಮುಂಬಯಿಯಲ್ಲಿ ಒಂದು ದೊಡ್ಡ ಮೇಳವನ್ನು ಸಂಘಟಿಸಿ ಅದರಲ್ಲಿ ವಿದೇಶವಸ್ತ್ರಗಳನ್ನು ಸುಟ್ಟರು. ಈ ದೃಶ್ಯವನ್ನು ನೋಡಲಿಕ್ಕೆಂದು ಸಹಸ್ರಾರು ಜನರು ಬಂದರು. ಉರಿಯು ಮೇಲೇರಿದಂತೆ ಮತ್ತು ಬಟ್ಟೆಗಳ ಮೊಟ್ಟೆಯನ್ನು ವ್ಯಾಪಿಸಿದಂತೆ ಬಾನಿನಲ್ಲಿ ಸಂತೋಷದ ಕೂಗು ಮೊಳಗಿತು. ಆ ಸಂದರ್ಭವನ್ನು ನೆನೆಸುತ್ತ ಅವರು " ಸ್ವದೇಶಿಯ ವಿಷಯದಲ್ಲಿ ಬೇರೆ ಯಾವ ಉಪಾಯವೂ ಸಾಧಿಸಿದಾಗ್ಗೆ ಈ ಅಗ್ನಿಕಾಂಡವು ಜನರ ಕಲ್ಪನೆಯನ್ನು ಕೆರಳಿದೆ ಎಂದು ನನಗೆ ನಿಶ್ಚಯವಾಗಿಯೂ ತೋರುತ್ತದೆ" ಎಂಬುದಾಗಿ ಬರೆದಿದ್ದಾರೆ. " ವಿದೇಶಿವಸ್ತ್ರಗಳನ್ನು ಧರಿಸುವದು ಪಾಪ. ನನ್ನ ವಿದೇಶೀಯ ವಸ್ತ್ರಗಳನ್ನು ಸುಟ್ಟು ನಾನು ನನ್ನ ನಾಚಿಕೆಯನ್ನು ನಿರ್ಮೂಲಗೊಳಿಸಿದ್ದೇನೆ."

ಕೇವಲ ಒಂದು ತುಂಡು ಬಟ್ಟೆಯನ್ನು ಸುತ್ತಿಕೊಂಡು ಗಾಂಧೀಜಿಯವರು ಸಾಮಾನ್ಯ ಭಾರತೀಯನಾದ ರೈತನನ್ನು ಪ್ರತಿನಿಧಿಸಿದರು. ಅವರು ಭಾರತದ ಮುಖವಾದರು. ಮೊದಲ ಬಾರಿಗೆ ಭಾರತದ ಜನ ಸಾಮಾನ್ಯರು ರಾಜಕೀಯದಲ್ಲಿ ಆಸಕ್ತಿಯನ್ನು ತೋರ್ಪಡಿಸಿದರು.

ಸ್ವದೇಶೀ ಚಳುವಳಿಯು ತುಂಬ ಯಶಸ್ವಿಯಾಯಿತು. ಗಾಂಧೀಜಿಯುವರು ಪ್ರತಿದಿನ ಚರಕಾವನ್ನು ನಡೆಸುತ್ತಿದ್ದರು ಮತ್ತು ಜನರು ಕೂಡ ಹಾಗೆಯೆ ಮಾಡಬೇಕೆಂದು ಉಪದೇಶಿಸಿದರು.





ಅಲ್ಪಾವಧಿಯಲ್ಲಿ ಭಾರತದ ಹಳ್ಳಿಗಳಲ್ಲಿ ಇಪ್ಪತ್ತುಲಕ್ಷ ಚರಕಾಗಳು ಬಳಕೆಯಲ್ಲಿ ಬಂದವು. ಬಟ್ಟೆಯ ದೃಷ್ಟಿಯಿಂದ ದೇಶವು ಸ್ವಯಂಪೂರ್ಣತೆಯನ್ನು ಗಳಿಸುವ ಪ್ರಯತ್ನದಲ್ಲಿ ಚರಕಾವೊಂದು ಪ್ರತೀಕವಾಯಿತು.



ಅತ್ತ ಸವಿನಯ ಶಾಸನಭಂಗ ಆಂದೋಲನವು ಮುಂದುವರಿದಿತ್ತು. ಆದರೆ ಅದು ಕೂಡ ಹಿಂಸಾಚಾರದಿಂದ ಕೂಡಿದ್ದಕಾರಣ ಗಾಂಧೀಜಿಯವರು ಅದನ್ನು ನಿಲ್ಲಿಸಬೇಕೆಂದು ಸೂಚಿಸಿದರು.

ಆದರೂ 1922 ರ ಮಾರ್ಚ್‌ನಲ್ಲಿ ತಮ್ಮ ಪತ್ರಿಕೆ "ಯಂಗ್ ಇಂಡಿಯಾ" ದಲ್ಲಿ ಟೀಕಾತ್ಮಕ ಲೇಖನಗಳನ್ನು ಬರೆದ ಕಾರಣ ಗಾಂಧೀಜಿಯವರ ಬಂಧನವಾಯಿತು. ಅವರನ್ನು ಸಾಬರಮತೀ ಸೆರೆಮನೆಗೆ ಕರೆದೊಯ್ದರು. ಅಹಮ್ಮದಾಬಾದಿನಲ್ಲಿ ವಿಚಾರಣೆಯು ಮೊದಲಾಯಿತು.

ಒರಟಾದ ತುಂಡುಬಟ್ಟೆಯನ್ನುಟ್ಟು ನಿರ್ಬಲವಾಗಿ ಕಂಡರೂ ಗಂಭೀರವಾಗಿ ಅವರು ನ್ಯಾಯಾಲಯವನ್ನು ಪ್ರವೇಶಿಸಿದಾಗ್ಗೆ ಪ್ರತಿಯೊಬ್ಬರೂ ಎದ್ದುನಿಂತರು. ಅವರೆಲ್ಲರೂ ಒಬ್ಬ ಮಹಾಪುರುಷನಿಗೆ ಗೌರವವನ್ನು ಸಲ್ಲಿಸುತ್ತಿದ್ದರು. ವಿಚಾರಣೆಯು ಮುಂದೆ ಸಾಗಿತು. ಗಾಂಧೀಜಿಯವರು ಪ್ರಚಲಿತವಾದ ಸರಕಾರದ ಪದ್ಧತಿಯನ್ನು ತೆಗಳಿದರು. ಅದು ದುಷ್ಟವಾದುದು ಎಂದರವರು. ಅದರ ವಿರುದ್ಧವಾಗಿ ತಾವು ಉಪದೇಶಮಾಡಿದುದನ್ನು ಒಪ್ಪಿಕೊಂಡರು; ಆದರೆ ಅವರ ಅಸ್ತ್ರವು ಅಹಿಂಸೆಯಾಗಿತ್ತು. ಅವರಿಗೆ ಆರುವರ್ಷಗಳ ಶಿಕ್ಷೆಯನ್ನು ವಿಧಿಸಿದರು.

ಇಡಿಯ ವಿಶ್ವದಲ್ಲಿ ಈ ಪ್ರಕರಣವು ಅತ್ಯಂತ ಆಸಕ್ತಿಯನ್ನು ಹುಟ್ಟಿಸಿದ ಕಾರಣ ಬ್ರಿಟಿಷರು ಮುಂದೆ ಎಂದೂ ಗಾಂಧೀಜಿಯವರನ್ನು ಬಹಿರಂಗವಾದ ವಿಚಾರಣೆಗೆ ಕರೆಯಲಿಲ್ಲ.

ಕಾರಾಗೃಹದಲ್ಲಿ ಅವರು ತಮ್ಮ ಆತ್ಮಚರಿತ್ರೆಯನ್ನು ಬರೆದರು; ಸೆರೆಮನೆಯಲ್ಲಿ ಬರೆಯಲಾದ ಗ್ರಂಥಗಳಲ್ಲಿ ಅದು ಶ್ರೇಷ್ಠವಾದುದೆಂದು ಈಗ ಪರಿಗಣಿಸಲಾಗಿದೆ. ಅಲ್ಲಿ ಅಧ್ಯಯನಕ್ಕಾಗಿ ಅವರಿಗೆ ತುಂಬ ಸಮಯವು ದೊರೆಯುತ್ತಿತ್ತು ಮತ್ತು ಅವರು ಅದನ್ನು ಫಲಪ್ರದವಾಗಿ ಬಳಸಿಕೊಂಡರು.

1924 ರ ಆದಿಯಲ್ಲಿ ಅವರು ತೀವ್ರವಾದ ಬೇನೆಯಿಂದ ಬಳಲಿದರು. ಹೊಟ್ಟೆಯಲ್ಲಿ ನೋವು, ಜ್ವರದಿಂದ ಬಾಧೆಯಾಗಿತ್ತು ಅವರಿಗೆ. ಪುಣೆಯ ಒಂದು ಆಸ್ಪತ್ರೆಯಲ್ಲಿ ಅವರು





ಕರುಳಿನ ಬೇನೆಗಾಗಿ ಶಸ್ತ್ರಕ್ರಿಯೆಯನ್ನು ಮಾಡಿಸಿಕೊಳ್ಳಬೇಕಾಯಿತು. ಅದು ನಡೆದಾಗ್ಗೆ ವಿದ್ಯುಚ್ಛಕ್ತಿಯು ನಿಂತಿತು ಮತ್ತು ಶಸ್ತ್ರಚಿಕಿತ್ಸಕರು ಕಂದೀಲಿನ ಬೆಳಕಿನಲ್ಲಿ ಕೆಲಸಮಾಡ ಬೇಕಾಯಿತು. 1924 ರ ಮಾರ್ಚ್ ತಿಂಗಳಲ್ಲಿ ಗಾಂಧೀಜಿಯವರ ಬಿಡುಗಡೆಯಾಯಿತು.

ಮುಂಬಯಿಯ ಸಮೀಪದಲ್ಲಿ ಜುಹುವಿನ ಕಡಲಂಚಿನ ಒಂದು ಚಿಕ್ಕ ಭವನಕ್ಕೆ ಗಾಂಧೀಜಿ ಯವರನ್ನು ಕರೆದುಕೊಂಡು ಹೋದರು. ಅವರು ಗುಣಹೊಂದುತ್ತಿದ್ದಾಗ ದೇಶದ ಅನೇಕ ಭಾಗಗಳಲ್ಲಿ ದೊಂಬಿಗಳಾದುವು.

ಅವರು ಅಶಕ್ತರಾಗಿದ್ದರೂ ಸೆಪ್ಟೆಂಬರ್ 18 ನೆಯ ದಿನಾಂಕದಿಂದ 21 ದಿನಗಳ ಉಪವಾಸ ವನ್ನು ಆರಂಭಿಸುವ ನಿರ್ಧಾರವನ್ನು ಮಾಡಿದರು. " ತನ್ನ ಜನರ ಪಾಪ " ಗಳಿಗಾಗಿ ಪ್ರಾಯಶ್ಚಿತ್ತ ಮಾಡುವದಾಗಿ ಈ ಕಾರ್ಯವನ್ನು ಕೈಗೊಂಡರು.







ಗಾಂಧೀಜಿಯವರು ವಿಧಾಯಕ ಕಾರ್ಯದತ್ತ ಸಾಗಿದಾಗ್ಗೆ ಸರಕಾರದ ಕ್ರಮಗಳು ಅವರ ಗಮನವನ್ನು ಸೆಳೆಯುತ್ತಿದ್ದವು. ಸ್ವಸಮರ್ಥರಾಗುವಂತೆ ಜನರಿಗೆ ಮಾರ್ಗದರ್ಶನಮಾಡುವ ಮತ್ತು ಉಪದೇಶ ನೀಡುವ ಕೆಲಸವಿತ್ತು ಗಾಂಧೀಜಿಯವರಿಗೆ.

1930 ರಲ್ಲಿ ಉಪ್ಪಿನ ಕರವನ್ನು ರದ್ದುಗೊಳಿಸಬೇಕೆಂದು ಅವರು ವೈಸ್‌ರಾಯನನ್ನು ಕೇಳಿಕೊಂಡರು. ಎಲ್ಲರ ಆಹಾರದಲ್ಲಿ ಉಪ್ಪು ಆವಶ್ಯಕವಾಗಿದ್ದರೂ ಆ ಕರವು ಬಡವರಿಗೆ ತುಂಬ ಭಾರವಾಗಿತ್ತು. ಅದನ್ನು ತೆಗೆದುಹಾಕಿದ್ದರೆ ಬಡಜನರಿಗೆ ಅತ್ಯಂತ ಪ್ರಯೋಜನವಾಗುತ್ತಿತ್ತು.

ಸರಕಾರವು ಅದಕ್ಕೆ ಒಪ್ಪಲಿಲ್ಲವೆಂದು ಗಾಂಧೀಜಿಯವರು ಸಾರ್ವಜನಿಕವಾಗಿ ಆ ಕಾಯದೆಯನ್ನು ಮುರಿಯುವದಾಗಿ ಸಾರಿದರು.

ಅದಕ್ಕಾಗಿ ತಮ್ಮ ಆಶ್ರಮದಿಂದ 200 ಮೈಲು ದೂರದಲ್ಲಿ ಸಮುದ್ರದ ದಂಡೆಯ ಮೇಲಿನ ದಾಂಡಿ ಎಂಬ ಗ್ರಾಮವನ್ನು ಅವರು ಆರಿಸಿದರು. ಮಾರ್ಚ್ 12 ನೆಯ ದಿನಾಂಕ ಬೆಳಗಿನ 6–30 ಗಂಟೆಗೆ ಹೊರಡಲು ಅವರು ಸನ್ನದ್ಧರಾದರು. ಅವರ ಮುಖದಲ್ಲಿ ಮೃದುಹಾಸ್ಯ, ಕೈಯಲ್ಲಿ ಕೋಲು, ಅವರ ಸೌಮ್ಯವಾದ ಕಣ್ಣುಗಳಲ್ಲಿ ದೃಢನಿರ್ಧಾರವಿತ್ತು.

ಅವರ ಸಂಗಡ ಆಶ್ರಮದ 79 ಜನ ಅನುಯಾಯಿಗಳಿದ್ದರು. ಉಪ್ಪಿನ ಮೇಲಿನ ಕರವನ್ನು ತೆಗೆದುಹಾಕುವವರೆಗೆ ತಿರುಗಿ ಬರುವಂತಿಲ್ಲ ಎಂದು ಅವರೆಲ್ಲರೂ ಸೇರಿ ಪ್ರತಿಜ್ಞೆ ಮಾಡಿದ ನಂತರ ಮುಂದುವರಿದರು.

ಈ ಪಾದಯಾತ್ರೆಯ ಸುದ್ದಿಯು ದೂರದೂರದವರೆಗೆ ಹಬ್ಬಿತು. ಸಾವಿರಾರು ಜನರು ನೋಡಲಿಕ್ಕೆ ಬಂದರು, ಮತ್ತು ಪೃಥ್ವಿಯ ಮೇಲಿನ ಯಾವ ಶಕ್ತಿಗೂ ಅಳುಕದಂತಹ ಈ ನಿರ್ಭಯ ನಾಯಕನನ್ನು ಹುರಿದುಂಬಿಸಲು ನಿಂತರು. ನೂರಾರು ಜನರು ಆ ದಂಡಯಾತ್ರೆಯಲ್ಲಿ ಭಾಗ ವಹಿಸಿದರು.



ಅವರನ್ನು ಕೆಲಹೊತ್ತಿನವರೆಗೆ ಸೇರಿದ ಜವಾಹರಲಾಲ ನೆಹರು ಆ ದೃಶ್ಯವನ್ನು ಈ ಶಬ್ದಗಳಲ್ಲಿ ಬಣ್ಣಿಸಿರುವರು. "ಕೈಯಲ್ಲಿ ಕೋಲನ್ನು ಹಿಡಿದುಕೊಂಡು ಅನುಯಾಯಿಗಳ ಹಿರಿತನದಲ್ಲಿ ದಿಟ್ಟವಾದ ಹೆಜ್ಜೆಗಳನ್ನಿಡುತ್ತ, ಮುಖದಲ್ಲಿ ಶಾಂತ ಮತ್ತು ನಿರ್ಭಯ ಭಾವವನ್ನು ತಳೆದು ಹೋಗುತ್ತಿರುವ ಅವರನ್ನು ನಾನು ನೋಡಿದೆನು. ಅದೊಂದು ರೋಮಾಂಚಕಾರಿಕ ದೃಶ್ಯವಾಗಿತ್ತು."





ಇಪ್ಪತ್ನಾಲ್ಕು ದಿನಗಳ ತರುವಾಯ ಪಾದಚಾರಿಗಳು ಕಡಲದಂಡೆಯ ದಾಂಡಿಯನ್ನು ತಲುಪಿದರು. ಅಂದು ಏಪ್ರಿಲ್ 5 ನೆಯ ದಿನಾಂಕ. ಆ ರಾತ್ರಿಯನ್ನು ಅವರೆಲ್ಲರೂ ಉಪ ವಾಸ ಮತ್ತು ಪ್ರಾರ್ಥನೆಯಲ್ಲಿ ಕಳೆದರು. ಬೆಳಗಿನಲ್ಲಿ ಅವರು ಸಮುದ್ರಸ್ನಾನ ಮಾಡಿದರು. ಎಂಟೂವರೆ ಗಂಟೆಗೆ ಗಾಂಧೀಜಿಯವರು ಬಾಗಿ ಒಂದು ಹಿಡಿ ಉಪ್ಪನ್ನು ಎತ್ತಿಕೊಂಡರು, ಆ ಸುಲಭವಾದ ಕಾರ್ಯದಿಂದ ಅವರು ಶಾಸನಭಂಗಮಾಡಿದರು. ಅಲ್ಲಿ ನೆರೆದ ಜನರೆಲ್ಲರೂ ಜಯಘೋಷಮಾಡಿದರು. ದಂಡಯಾತ್ರಿಕರು ಸಂತೋಷದಿಂದ ಪುಲುಕಿತರಾದರು.

ಉತ್ಸಾಹದಿಂದ ತುಂಬಿದ ಸರೋಜಿನಿ ನಾಯಡು ಅವರು " ವಿಮೋಚಕನಿಗೆ ಗೆಲುವಾಗಲಿ " ಎಂದು ಕೂಗಿದರು.

ಇದು ದೇಶವು ದಾರಿಕಾಯುತ್ತಿದ್ದ ಸಂಕೇತವಾಯಿತು. ನಾಡಿನ ತುಂಬ ಹಳ್ಳಿಗಳಲ್ಲಿ ಮತ್ತು ಹೊಳೆಗಳಲ್ಲಿ ಹೆಂಗಸರೂ ಗಂಡಸರೂ ಯಾವ ಕರವನ್ನು ತೆರದೆ ಉಪ್ಪನ್ನು ತಯಾರಿಸಿ ಮಾರ ತೊಡಗಿದರು. ಮೇ ತಿಂಗಳ 4 ನೆಯ ದಿನಾಂಕ ಸರಕಾರವು ಗಾಂಧೀಜಿಯವರನ್ನು ಸೆರೆಹಿಡಿದು ಪುಣೆಯ ಸಮೀಪದಲ್ಲಿನ ಯರವಡಾ ಕಾರಾಗೃಹಕ್ಕೆ ಕಳುಹಿಸಿತು.

ಗಾಂಧೀಜಿಯವರು ಧಾರಾಸನಕ್ಕೆ ಹೊರಡಬೇಕಿತ್ತು. ಈಗ ಆ ಯೋಚನೆಯನ್ನು ಶ್ರೀಮತಿ ನಾಯಡು ಅವರು ಕೈಕೊಂಡರು. ಅವರ ನೇತೃತ್ವದಲ್ಲಿ 2500 ಅಹಿಂಸಾಬದ್ಧ ಸ್ವಯಂ ಸೇವಕರು ಧಾರಾಸನದ ಉಪ್ಪಿನ ಮಳಿಗೆಯನ್ನು ಮುತ್ತಿದರು. ಆದರೆ ಉಪ್ಪಿನ ಮಡೆಗಳನ್ನು ತಂತಿಯ ಬೇಲಿಯಿಂದ ಮತ್ತು ಕಂದಕಗಳಿಂದ ಸುತ್ತುವರಿಸಿದ್ದರು. ಲಾಠಿಗಳನ್ನು ಹಿಡಿದ 400 ಜನ ಪೋಲೀಸರು ಮತ್ತು ಬಂದೂಕುಗಳೊಡನೆ 25 ಜನರು ಅಲ್ಲಿಯೆ ಸಿದ್ಧತೆಯಲ್ಲಿ ನಿಂತಿದ್ದರು.

ಆ ಬೇಲಿಯ ಆಚೆಗೆ ತುಸು ದೂರದಲ್ಲಿ ಸತ್ಯಾಗ್ರಹಿಗಳು ನಿಂತರು. ಒಂದು ಪಥಕವು ಕಂದಕ ಮತ್ತು ಮುಳ್ಳಿನ ತಂತಿಯ ಬೇಲಿಯತ್ತ ಮುಂದುವರಿಯಿತು. ಪೋಲೀಸರು ಅವರ ಮೇಲೆ ನುಗ್ಗಿ ಅವರ ತಲೆಯಮೇಲೆ ಉಕ್ಕಿನ ತುದಿಯಿದ್ದ ಲಾಠಿಗಳಿಂದ ಹೊಡೆದರು.

ಅವರಲ್ಲಿ ಒಬ್ಬರು ಕೂಡ ಆತ್ಮರಕ್ಷಣೆಗಾಗಿ ಕೈಯನ್ನು ಎತ್ತಲಿಲ್ಲ. ಅವರು ಅಲ್ಲಿಯೆ ಹೊಸೆಯುತ್ತ ಬಿದ್ದುಕೊಂಡರು; ನಿಷ್ಚೇಷ್ಟರಾಗಿ ಅವರು ನೋವಿನಲ್ಲಿ ನರಳಿದರು; ತಲೆಬುರುಡೆಗಳು, ಭುಜಗಳು ಒಡೆದು ಅವರ ಬಿಳಿಯ ಬಟ್ಟೆಗಳು ರಕ್ತದಿಂದ ಕೆಂಪಾದವು.

ಆದರೆ ಅವರನ್ನು ಭಯವು ಮಾತ್ರ ಆವರಿಸಲಿಲ್ಲ. ಒಂದು ಪಥಕವನ್ನು ಸದೆಬಡೆದರೆ ಇನ್ನೊಂದು ಮುಂದೆ ಬರುತ್ತಿತ್ತು. ಎದುರೇಟು, ಪ್ರತೀಕಾರ ಅಥವಾ ಹೋರಾಟ ಯಾವುದೂ ಇರಲಿಲ್ಲ. ದಂಡಯಾತ್ರಿಕರು ಹೊಡೆತಬೀಳುವವರೆಗೆ ಸುಮ್ಮನೆ ಮುಂದೆ ಸಾಗುತ್ತಿದ್ದರು.

ಬ್ರಿಟಿಷ್ ಸರಕಾರದ ಈ ಕಾಡ್ತು ನಡತೆಯಿಂದ ಇಡಿಯ ದೇಶವೇ ಅದರ ವಿರುದ್ಧ ನಿಂತಿತು. ಸತ್ಯಾಗ್ರಹಿಗಳ ಅಂತಹ ಧೀರ ಮತ್ತು ಅಹಿಂಸಾತ್ಮಕ ಆಚರಣೆಯ ದೃಶ್ಯವು ಅವರು ಆ ಪಾಶವಿಕ ದಮನವನ್ನು ಮೌನವಾಗಿ ಪ್ರತಿಭಟನೆಯಿಲ್ಲದೆ ಸಹಿಸಿಕೊಂಡ ಕಾರಣ ಎಲ್ಲರಿಂದ ಅವರಿಗಾಗಿ ಹಾಗೂ ಅವರು ವಹಿಸಿಕೊಂಡ ಹೊಣೆಗಾಗಿ ಶ್ಲಾಘನೆಯನ್ನೂ ಗೌರವವನ್ನೂ ತಂದಿತು.





ದೃಢಮನಸ್ಸಿನ ವೀರ ಜನರು ತಮ್ಮ ಸ್ವಾತಂತ್ರ್ಯವನ್ನು ತಿರುಗಿ ಪಡೆಯಬೇಕು ಎಂಬ ತೀವ್ರವಾದ ಆಸೆಯಿಂದ ಶಾಂತವಾಗಿಯೂ ಎದೆಗುಂದದೆ ಧೈರ್ಯದಿಂದಲೂ ಹೆಣಗುತ್ತಿರುವ ನಿದರ್ಶನವು ಎಲ್ಲೆಡೆಯಲ್ಲಿಯೂ ನೋಡಲಿಕ್ಕೆ ದೊರೆಯುತ್ತಿತ್ತು. ಹೆಂಗಸರು ಕೂಡ ಮನೆಯ ಮಟ್ಟಿಗೆ ಸೀಮಿತವಾದ ನೂರಾರು ವರ್ಷದ ಪ್ರತ್ಯೇಕತೆಯನ್ನು ತೊರೆದು ಗಂಡುಮಕ್ಕಳ ಸಂಗಡ ಭುಜಕ್ಕೆ ಭುಜವನ್ನು ಹಚ್ಚಿ ಹೋರಾಡಲು ಮುಂದಾದರು. ಅಂದಿನಿಂದ ಭಾರತೀಯರಿಗೆ ತಮ್ಮ ನಾಡಿನ ಮೇಲೆ ಬ್ರಿಟಿಷರ ಪ್ರಭುತ್ವವಿರುವದನ್ನು ತಡೆಯದಂತಾಯಿತು.